

# ಪ್ರಜಾತಂತ್ರದ ಹೆದ್ದಾರಿ

ಕು. ಶಿ. ಹರಿದಾಸ ಭಟ್ಟ

UNITED STATES

# ATOMIC ENERGY COMMISSION

WASHINGTON

November 10. 1949

Dear Mr. Bhat:

Your letter was a great joy. You are a perceptive person, for it's quite true that, as you say, TVA is still the thing "nearest to your heart." But I regret that I am unable to find time to write thoughts on this subject, because of the requirements of my work which are very great.

The visit of your great Prime Minister to this country was a huge success, in a human sense particularly. My own opportunity to talk with him gave me re-assurance that great men still walk the earth.

Sincerely yours,

**David E. Lilienthal,**
CHAIRMAN.

**Mr. K, S. Haridasa Bhat,**
KUNJIBETTU, **UDIPI,** India.

DEL : ok.

**ಪ್ರಿಯ ಭಟ್ಟರೇ,**

ನಿಮ್ಮ ಪತ್ರವನ್ನು ನೋಡಿ ಅತ್ಯಂತ ಹರ್ಷವಾಯಿತು. ನೀವು ಹೇಳಿರುವಂತೆ ಟೀವೀಏ ನನ್ನ ಹೃದಯಕ್ಕೆ ಅತಿ ಸಮೀಪವಾಗಿರುವುದು ನಿಜ. ಇದನ್ನರಿತ ನೀವು ಸೂಕ್ಷ್ಮಗ್ರಾಹಿಗಳೆಂದು ಭಾವಿಸುತ್ತೇನೆ. ಆದರೆ ನನ್ನ ಅತಿ ಮಹತ್ವದ ಕಾರ್ಯಭಾರದ ದೆಸೆಯಿಂದ ಇದರ ಕುರಿತು ಒಂದೆರಡು ಮಾತುಗಳನ್ನು ಬರೆಯಲು ಅಸಮರ್ಥನಾಗಿದ್ದೇನೆ.

ನಿಮ್ಮ ಮಹಾ ಪ್ರಧಾನಮಂತ್ರಿವರ್ಯರು ಈ ದೇಶಕ್ಕೆ ಆಗಮಿಸಿದುದು ಮುಖ್ಯತಃ ಮಾನವರೊಳಗಿನ ಪರಸ್ಪರ ಸಂಪರ್ಕ ಬಾಂಧವ್ಯಗಳ ದೃಷ್ಟಿಯಿಂದ, ತುಂಬಾ ಯಶಸ್ವಿಯಾಯಿತು. ನನಗೆ ಅವರೊಡನೆ ಮಾತಾಡುವ ಸೌಭಾಗ್ಯ ದೊರೆತಾಗ ಪ್ರಪಂಚದಲ್ಲಿ ಮಹಾತ್ಮರುಗಳು ಇನ್ನೂ ಇದ್ದಾರೆ ಎಂಬ ನನ್ನ ನಂಬುಗೆಗೆ ಪುಟವಿಟ್ಟಂತಾಯಿತು.

ಇತಿ

**ಡೇವಿಡ್ ಇ. ಲಿಲಿಯೆಂಥಾಲ.**

# ಪ್ರಜಾತಂತ್ರದ ಹೆದ್ದಾರಿ

ಅ ಥ ವಾ

## ಟೆನಸಿ ಕಂದರದ ಯೋಜನೆ

(ಟೀ ವೀ ಏ)

ಬರೆದವರು:
ಕು. ಶಿ. ಹರಿದಾಸ ಭಟ್ಟ, ಬಿ. ಎ- (ಆನರ್ಸ್.)
ಎಫ್. ಆರ್. ಈ. ಎಸ್. (ಲಂಡನ್)

ಶ್ರೀ. ಶಿವರಾಮ ಕಾರಂತರ ಮುನ್ನುಡಿ.

೧೯೫೦

ಮುದ್ರಕರು: ಪ್ರಕಾಶಕರು:
ಕಲ್ಯಾಣಪುರ ಪ್ರೆಸ್ ಲಿ., ಉಡುಪಿ.

# ಅರ್ಪಣೆ

ನನ್ನ ಕನ್ನಡದ ಕುಲಗುರು
ಶ್ರೀಮಾನ್ ಕಡಿಯಾಳಿ ರಾಮಚಂದ್ರ ಉಪಾಧ್ಯಾಯ, ವಿದ್ವಾನ್
ಇವರ ಸನ್ನಿಧಿಗೆ–



(ಒಡೆತನವೆಲ್ಲ ಲೇಖಕರದು)

THE AUTHOR ACKNOWLEDGES WITH THANKS THE VARIED HELP RENDERED HIM SO KINDLY BY 1. THE T.V.A. AUTHORITIES AT KNOXVILLE. 2. MR. DAVID. E. LILIENTHAL. EX-CHAIRMAN T. V. A. 3. MR. STANLEY R. CHARTRAND: PUBLIC AFFAIRS OFFICER, USIS, MADRAS.

# ಅರಿಕೆ

ಇದೊಂದು ರಾಜಕೀಯ ವ ಆರ್ಥಿಕ ಗ್ರಂಥ. ಇದನ್ನು ಬರೆಯು ವುದು ನನ್ನ ಮಟ್ಟಿಗಷ್ಟು ಚರಿತ್ರಾರ್ಹವೆಂದು ಹೇಳಲಡ್ಡಿಯಿಲ್ಲ, ಶಾಸ್ತ್ರೀಯ ವಿಚಾರಗಳನ್ನು ಕನ್ನಡದಲ್ಲಿ ಚಿಂತಿಸುವ ಯತ್ನ ಇಲ್ಲಿ ನಡೆ ದಿದೆ. ನನಗೆ ಬೇಕಾದ ಪಾರಿಭಾಷಿಕ ಪದಗಳನ್ನು ನಾನೇ ಬೇಕಾದಂತೆ ಸೃಷ್ಟಿಸಿಕೊಂಡಿರುವುದರಿಂದ ಪದಪ್ರಯೋಗಸೂಚಿಯೊಂದನ್ನು ಕೊಡು ವುದವಶ್ಯವಾಗಿದೆ; ಕೊಟ್ಟಿದ್ದೇನೆ.

ನಾನು 'ಪ್ರಜಾತಂತ್ರದ ಹೆದ್ದಾರಿ" ಎಂದೊಡನೆ, ಶ್ರೀ. ಲಿಲಿಯೆಂ ಥಾಲರು ಬರೆದ 'ಟೇವೀಏಃ ಡೆಮೊಕ್ರಸಿ ಆನ್ ದ ಮಾರ್ಚ್' ಎಂಬ ಗ್ರಂಥವನ್ನೋದಿದವರಿಗೆ ಅದರ ನೆನೆವರಿಕೆಯಾದೀತು. ಆದರೆ ನನ್ನೀ ಪುಸ್ತಕ ಯಾರ ನಕಲೂ ಅಲ್ಲ, ಯಾವ ಅನುವಾದವೂ ಅಲ್ಲ. ಶ್ರೀ ಲಿಲಿಯೆಂಥಾಲರಿಂದ ಸ್ಫೂರ್ತಿ ಪಡೆದ ಪುಸ್ತಕವಾದುದರಿಂದ ಅದು ನನ್ನ ಮುಖ್ಯ ಅವಲಂಬನೆ ನಿಜ. ಅಲ್ಲದೆ, ಇನ್ನೂ ಅನೇಕ ಸಂದರ್ಭ ಸಾಮಗ್ರಿಯನ್ನುಪಯೋಗಿಸಿಕೊಂಡಿದ್ದೇನೆ. ಇವನ್ನು ನನಗೆ ಒದಗಿ ಸಿದ ನಾಕ್ಸ್‌ವಿಲೆಯ ಟೇವೀಏ ಅಧಿಕಾರಿಗಳಿಗೂ, ಟೇವೀಏಯ ಮಾಜಿ ಅಧ್ಯಕ್ಷರೂ, ಸದ್ಯ ಸಂಯುಕ್ತ ರಾಷ್ಟ್ರದ ಅಣುಶಕ್ತಿ ಸಮಿತಿಯ ಅಧ್ಯ ಕ್ಷರೂ ಆಗಿರುವ ಶ್ರೀ ಲಿಲಿಯೆಂಥಾಲ ಮಹಾನುಭಾವರಿಗೂ, ನಾನು ಚಿರಋಣಿ. ಟೇವೀಏ ಅಧಿಕಾರಿಗಳು ಉತ್ತಮವಾದ ಅನೇಕ ಭಾವ ಚಿತ್ರಗಳನ್ನೂ, ಹಲವು ಸೂಕ್ತ ಸಲಹೆಗಳನ್ನು ಇತ್ತು ಉಪಕರಿಸಿದ್ದಾರೆ.

ನಾನು ಈ ಪುಸ್ತಕ ಬರೆಯುತ್ತಿರುವ ವೇಳೆ ಒಳ್ಳೆಯ ಮಾತು ಹೇಳಿ ಹುರಿದುಂಬಿಸಿದ ಗೆಳೆಯರಲ್ಲಿ ಬನ್ನಂಜೆ ಮತ್ತು ಎಸ್ಸೆಲ್ ಮುಖ್ಯ. ಬನ್ನಂಜೆಯವರು "ಯಾರ ಕಿಸೆ, ಖಜಾನೆಯಿಂದ ಕದ್ದಾದರೂ ಚಿಂತಿಲ್ಲ; ಇದನ್ನು ಪ್ರಕಟಿಸಬೇಕು'' ಎಂದು ಛಲಮಾಡುವಷ್ಟು ದೂರ ದುಡುಕಿ ದವರು. ನನಗೆ ಅಷ್ಟು ಧೈರ್ಯ ಸಾಲದೆ ಹೋದುದರಿಂದ ನನ್ನ ಆತ್ಮೀ ಯರೊಬ್ಬರಿಗೆ ಶರಣುಹೋದೆ. ನನ್ನ ಜೀವನದ ಎಲ್ಲ ಪ್ರಯೋಗಗಳ ಲ್ಲಿಯೂ ಒಲುಮೆಯಿಂದ ಸಹಕರಿಸುತ್ತಿರುವ ಅವರು ನನಗೆ ಈ ಸಂದರ್ಭ

ದಲ್ಲಿ ಅಗತ್ಯವಿರುವ ಹುಮ್ಮಸು, ಧೈರ್ಯ, ಸಾಹಸ ಎಲ್ಲವನ್ನೂ ತಂದು ಕೊಟ್ಟರು. ಅವರ ಉಪಕೃತಿ ಇಲ್ಲಿ ಹೇಳಿ ಮುಗಿಸಲಾರೆ. ನನ್ನ ಇತರ ಕನ್ನಡ ಬಂಧುಗಳು ಹಲವರು ಜಾಹೀರಾತು ಕೊಟ್ಟು ಉಪಕರಿಸಿ ನನ್ನ ಮೇಲಿನ ಹಣದ ಹೊಣೆಯನ್ನು ಬಹುಮಟ್ಟಿಗೆ ಇಳಿಸಿದ್ದಾರೆ. ಇದಕ್ಕಾಗಿ ಇವರೆಲ್ಲರಿಗೆ ನನ್ನ ಮೊದಲ ಧನ್ಯವಾದ ಸಲ್ಲಬೇಕು.

ಕಲ್ಯಾಣಪುರ ಪ್ರೆಸ್ಸಿನ ವ್ಯವಸ್ಥಾಪಕ ವರ್ಗದವರು ಪುಸ್ತಕವನ್ನು ಸಕಾಲದಲ್ಲಿ ಹೊರಡಿಸುವುದಕ್ಕೆ ತುಂಬಾ ಹೆಣಗಾಡಿದ್ದಾರೆ. ಅವರಿಗೂ, ಅವರಿಗೆ ಬೆಂಬಲವಾಗಿ ನಿಂತ ಅಲ್ಲಿಯ ಪ್ರಿಂಟರುಮಹಾಶಯರೇ ಮೊದಲಾದ ಕೆಲಸಗಾರ ಬಂಧುಗಳಿಗೂ, ನಾನು ಬಹಳ ಆಭಾರಿಯಾಗಿದ್ದೇನೆ, ನಟ್ಟಿರುಳ ತನಕವೂ ಒದ್ದಾಟ ಮುಂದುವರಿಸಿದುದರ ಫಲವಾಗಿ ಉಳಿದು ನಿಂತ ಅಲ್ಪಸ್ವಲ್ಪ ಮುದ್ರಣ ದೋಷಗಳನ್ನು ಕನ್ನಡ ಹಂಸಗಳು ಉದಾರವಾಗಿ ಮನ್ನಿಸ ತಕ್ಕುದು.

ಶಾಸ್ತ್ರೀಯ ಗ್ರಂಥ ಬರೆವ ಇಲಾಖೆಯಲ್ಲಿ ನಾನಿನ್ನೂ ನುರಿತವನಲ್ಲ. ಆದರೆ ಹಾಲುಹಸುಳೆ ಏನೂ ಆಗಿರಲಿಕ್ಕಿಲ್ಲವೆಂದು ಸಾಹಸ ಮಾಡಿದ್ದೇನೆ. ಇಲ್ಲಿನ ವಸ್ತು ನನಗೆ ಅತ್ಯಂತ ಪ್ರಿಯವಾದುದು. ವಿಕೇಂದ್ರೀಕರಣವಿಲ್ಲದ ಪ್ರಜಾರಾಜ್ಯವು ಪ್ರಜಾತಂತ್ರದ ಅರ್ಥಶೂನ್ಯ ಅಣಕವೆಂದು ಗಾಂಧೀಜಿ ಪದೇ ಪದೇ ಸಾರಿದ್ದಾರೆ. ನಮ್ಮ ಭಾರತದ ಪ್ರಜಾಸರಕಾರ ಅವರ ಹಾದಿಯನ್ನುಲ್ಲಂಘಿಸಿ ನಡೆದಿರುವುದನ್ನು ಕಂಡು ನನಗೆ ಖೇದವೆನಿಸಿದೆ. ನಾಳೆ ಜನವರಿ ೨೬ಕ್ಕೆ ಜಾರಿಗೆ ಬರುವ ಹೊಸ ಘಟನೆಯನ್ವಯ ಪ್ರಜಾತಂತ್ರದ ಉಸಿರುಕಟ್ಟುವುದು ತೀರ ಸ್ವಾಭಾವಿಕವೆಂದು ನಾನೆಣಿಸಿದ್ದೇನೆ. ನೂರಾರು ವರ್ಷಗಳ ಅಖಂಡ ಇತಿಹಾಸದ ಭಟ್ಟಿಯಲ್ಲಿಳಿದು ಬಂದ ಬ್ರಿಟಿಷ್ ಪಾರ್ಲಿಮೆಂಟ ಪದ್ಧತಿಯಾಗಲಿ, ಅಥವಾ ಅದರ ಅಮೇರಿಕನ್ ಮತ್ತು ಆಸ್ಟ್ರೇಲಿಯನ್ ನಕಲುಗಳಾಗಲಿ, ಒಟ್ಟುಸೇರಿ ತಯಾರಿಸಿದ ಘಟನೆ ಒಂದು ವಿಶೇಷತರದ ಕಲಸುಮೇಲೋಗರವೇ ಹೊರತು ಪ್ರಜಾತಂತ್ರಕ್ಕೆ ಮಾರ್ಗದರ್ಶಿನಿಯಾಗಲಾರದು. ಟೇವೀಏಯ ಯಶಸ್ಸನ್ನು ಆಳವಾಗಿ ಅಭ್ಯಸಿಸಿದ ಮೇಲೆ ನನ್ನ ನಂಬುಗೆ ಇನ್ನಷ್ಟು ಭದ್ರವಾಗಿದೆ, ಅಚಲವಾಗಿದೆ.

ಒಳ್ಳೆಯ ಕೆಲಸಕ್ಕೆ ದೈವಸಹಾಯ ಒದಗಿಯೇ ತೀರುವುದೆಂಬು ದನ್ನು ಸಾಬೀತು ಮಾಡಲೆಂದೋಏನೋ, ಈ ಬಾರಿಯ ಪರ್ಯಾಯಕ್ಕೆ ಶ್ರೀಮಾನ್ ಶಿವರಾಮಕಾರಂತರು ನಮ್ಮೂರಿನಲ್ಲಿ ಆವಿರ್ಭವಿಸಿದರು. ನನ್ನ ಪುಸ್ತಕ ಅಚ್ಚಿನ ಮನೆಯಿಂದ ಇದೇ ಹೊರಬೀಳುವುದರಲ್ಲಿದ್ದರೂ, ಶ್ರೀ. ಕಾರಂತರು ಅತಿ ಹರ್ಷದಿಂದ ನನ್ನ ಮುನ್ನುಡಿಯ ಕೋರಿಕೆ ಯನ್ನು ಅತ್ಯಲ್ಪಾವಕಾಶದಲ್ಲಿ ನೆರವೇರಿಸಿದುದಕ್ಕೆ ಅವರಿಗೆ ನಾನು ತುಂಬಿದ ಎದೆಯಿಂದ ವಂದಿಸುತ್ತೇನೆ. ಮುನ್ನುಡಿ ಬರೆಯಿಸಬೇಕೆಂದು ನಾನು ಹೆಣಗಾಡಿದ ಇತಿಹಾಸದಲ್ಲಿ ಕಾರಂತರ ಬಿಚ್ಚುಮನಸ್ಸಿನ ಆಶೀ ರ್ವಾದ ಸ್ವರ್ಣಲಿಖಿತ ಪುಟವೇ ಸರಿ.

ಆದರೆ ಪ್ರಥಮತಃ ನಾನು ಆರಿಸಿದ ಮಹನೀಯರೆಂದರೆ ನಮ್ಮ ವೀಸೀಯವರು· ಅನಾರೋಗ್ಯದ ನಿಮಿತ್ತ ಬರೆಯಲಾರೆನೆಂದೂ, ಆದರೆ ತಡೆಯುವುದಗತ್ಯವಿಲ್ಲವೆಂದೂ ಹೇಳಿ, ಓಲೆಯ ಕೊನೆಯಲ್ಲಿ ಅವರು ಬರೆದ ಆಶೀರ್ವಚನದ ಒಳ್ನುಡಿ ಕನ್ನಡಿಗರಿಗೆ ರಸದೂಟವೆ ಸರಿ, ಎಂದು ಬಗೆದು ಅದನ್ನಿಲ್ಲಿ ಇರಿಸಿದ್ದೇನೆ.

"ನಿಮ್ಮ ಪ್ರಯತ್ನ ಸರ್ವಥಾ ಸ್ತುತ್ಯ. ಇಂಥದನ್ನು ನಮ್ಮ ಜನ ಇನ್ನೂ ಬಯಸರು. ವೆಚ್ಚಮಾಡಿ, ಅಚ್ಚಾದ ಪುಸ್ತಕ ಪುಕ್ಕಟೆಕೊಟ್ಟರೂ ಪುರಸ್ಕರಿಸರು. ಪುಸ್ತಕಗಳನ್ನು ಬರೆಯಬಲ್ಲವರು ಬರೆಯಲು ಮಾತ್ರ ಹಿಂಜರಿಯಬಾರದು. 'ತತ್ತ್ವ', ವಾದ', ಒತ್ತಟ್ಟಿಗಿರಲಿ· ಮನಸ್ಸಿನ ವಿಶ್ವಾಸ, ಲೋಕಪ್ರಯೋಜನಾಕಾಂಕ್ಷೆ, ಇವು ಯಾವ ವಾದದಲ್ಲಿಯೂ ಮುಖ್ಯ ಅಂಶವೇ. ತಾವು ಇದಕ್ಕೆ ಒಲಿದುದಕ್ಕೆ ಸಂತೋಷ ಪಡುತ್ತೇನೆ. ನಿಮ್ಮ ಪ್ರಯತ್ನ ಫಲಿಸಲಿ. .... .... .... ವಿ. ಸೀತಾರಾಮಯ್ಯ"

ವಿಚಾರಶೀಲ ಕನ್ನಡಜನ ನನ್ನ ಈ ಎಸಳನ್ನು ಆದರದಿಂದ ಬರಮಾಡಿಕೊಳ್ಳಲಿ.

ಕ್ರಿಸ್ಮಸ್, ೧೯೪೯.
ಕುಂಜಿಬೆಟ್ಟು.

ಇತಿ
ಕು. ಶಿ. ಹರಿದಾಸ ಭಟ್ಟ.

# ಮುನ್ನುಡಿ

ಇಂದು ಕನ್ನಡದಲ್ಲಿ ವೈಜ್ಞಾನಿಕ ವಿಷಯಗಳಲ್ಲಿ ಬರವಣಿಗೆಗಳು ತೀರ ಕಡಮೆಯಾಗಿವೆ. ನಮ್ಮ ನಾಡು ಅರ್ವಾಚೀನಯುಗದಲ್ಲಿ ತಲೆ ಎತ್ತಿ ನಿಂತು ಬಾಳಬೇಕಾದರೆ-ಈ ಯುಗದ ಮನೋವೃತ್ತಿ, ಪ್ರವಾಹಗಳ, ಸುಳಿವುಸೆಳವುಗಳ ಅರಿವನ್ನು ತಂದುಕೊಳ್ಳುವುದು ಅವಶ್ಯ. ಅದರಲ್ಲೂ ವಿಜ್ಞಾನದ ದಿನದಿನದ ಪ್ರಗತಿಯನ್ನು ಪರಿಶೀಲಿಸಿ ತನಗೆ ಹಿತವಾದುದನ್ನು ಆರಿಸಿ—ಜನಜೀವನದ ಆರ್ಥಿಕ ಮಟ್ಟವನ್ನು ಹೆಚ್ಚಿಸದೆಯೆ ಯಾವ ಕೆಲಸವೂ ಆಗಲಾರದು. ಹೊಟ್ಟೆತುಂಬುವ ಮೊದಲು-ನಯನೀತಿ, ದಯಾಧರ್ಮ, ಸಂಸ್ಕೃತಿ, ವಿಲಾಸಗಳು ಮನುಷ್ಯನ ಪಾಲಿಗೆ ಸಲ್ಲದ ಬಯಕೆಗಳೆನಿಸುತ್ತವೆ. ಆರ್ಥಿಕ ಪರಿಪುಷ್ಟಿಯೇ ಜೀವನದ ಸರ್ವಸ್ವವಲ್ಲವಾದರೂ, ಅದರ ನೆಲಗಟ್ಟಿನ ಮೇಲೆಯೇ ಬದುಕು ನಿಲ್ಲುವುದು ಅನಿವಾರ್ಯದ ಪ್ರಶ್ನೆಯಾಗಿದೆ,

ಶ್ರೀ. ಕು- ಶಿ. ಹರಿದಾಸಭಟ್ಟರು ಅಂತಹ ಒಂದು ಪ್ರಯೋಗದ ಪರಿಚಯವನ್ನು ಈ ಪುಸ್ತಕದಲ್ಲಿ ಮಾಡಲು ಹವಣಿಸಿದ್ದಾರೆ. ಅವರು ಎತ್ತಿಕೊಂಡ ವಿಷಯ ಮಹತ್ತರವಾದುದು. "ಟಿ. ವಿ. ಎ." ಎಂಬ ಮಾತು ಆಧುನಿಕ ಜೀವನದ ಪಾಲಿಗೆ ರಾಮನಾಮವಾಗಿದೆ. ಸಂಯುಕ್ತ ಅಮೇರಿಕದ ಟಿನಸಿ ಕಣಿವೆಯ ಪ್ರದೇಶದಲ್ಲಿ-ಮಾಡುತ್ತಿರುವ ಮಹತ್ತರ ಪ್ರಯೋಗದ ಹೆಸರೇ "ಟಿ. ವಿ. ಎ."

ಒಂದು ದೇಶದ ಅರ್ಥಿಕ ಬೆಳವಣಿಗೆ, ಅಲ್ಲಿನ ನೈಸರ್ಗಿಕ ಉತ್ಪನ್ನ, ಜನಶಕ್ತಿ, ಜಲಶಕ್ತಿ ಮೊದಲಾದುವನ್ನು ಪೂರ್ವಾಪರ ಯೋಜನೆಯಿಂದ, ಸಮಗ್ರ ದೃಷ್ಟಿಯಿಂದ ಬೆಳೆಯಿಸಿಕೊಂಡು ಹೋಗಬೇಕೆಂಬುದೇ ಈ ಟಿವಿಎ ಯೋಜನೆಯ ಧ್ಯೇಯ. ವ್ಯಕ್ತಿಗಳು ತಮಗಿಷ್ಟ ಕಂಡಂತೆ, ಸ್ವಲಾಭ ದೃಷ್ಟಿಯಿಂದ ಆರ್ಥಿಕಕ್ಷೇತ್ರಕ್ಕೆ ಕೈಯಿಕ್ಕಿದರೆ-ಇಂದಿನ ಒಟ್ಟು ಸಮಾಜ ಹಿತಕ್ಕೂ ಹಾನಿ, ನಾಳಿನ ದೇಶ ಹಿತಕ್ಕೂ ಹಾನಿ, ನಿಸರ್ಗ ಮಾಡುತ್ತಿರುವ ದೈವದತ್ತ ಸಂಪತ್ತಿನ ದುರ್ವ್ಯಯವಾಗುತ್ತದೆ-ಎಂಬುದ

ರಿಂದ ಆ ಎಲ್ಲ ದೃಷ್ಟಿಗಳನ್ನಿರಿಸಿಕೊಂಡು- ನಾಡಿನ ಅಭಿವೃದ್ಧಿ ಸಾಧಿಸಬೇಕಾದುದು ಮುಖ್ಯವಾಗಿದೆ.

ಈ ಕೆಲಸ ಟಿವಿಎ ಹೇಗೆ ಮಾಡುತ್ತಿದೆ, ಅವರ ಹಿನ್ನೆಲೆಯೇನು-ಫಲವೇನು-ಲಾಭಾಲಾಭವೇನು ಎಂಬುದನ್ನು ಶ್ರೀಯುತ ಭಟ್ಟರು ಈ ಗ್ರಂಥದಲ್ಲಿ ಸೂಕ್ಷ್ಮವಾಗಿ ಚಿತ್ರಿಸಲೆಳಸಿದ್ದಾರೆ.

ಇದು ಹತ್ತಾರು ವಿಜ್ಞಾನಗಳಿಗೆ ಸಂಬಂಧಿಸಿದ ಕಷ್ಟವಾದ ವಿಷಯ- ಕೃಷಿ, ವಾಣಿಜ್ಯ, ವಿದ್ಯುತ್ತು, ಖನಿಜಶಾಸ್ತ್ರ-ಎಲ್ಲವೂ ಬೆರೆತುಕೊಂಡ ವಿಷಯ. ಸುಲಭವಾಗಿ ತಿಳಿಯಹೇಳುವುದು ಕಷ್ಟ. ಅದೂ ಏನೇನೂ ಪೂರ್ವಪರಿಚಯವಿಲ್ಲದ ಕನ್ನಡದ ಜನಕ್ಕೆ ಗಹನವಾದ ಇಂಥ ವಿಷಯದ ಮೇಲೆ ಬರೆಯುವುದೇ ಕಷ್ಟ. ಆದರೂ ಶ್ರೀಯುತರು ಈ ಸಾಹಸಕ್ಕೆ ಕೈಯಿಕ್ಕಿ ಕನ್ನಡಜನತೆಗೆ ತಮ್ಮದಾದ ಸೇವೆ ಸಲ್ಲಿಸಿದ್ದಾರೆ.

ಜನತೆ ಅವರ ಪ್ರಯತ್ನದ ಲಾಭ ಪಡೆಯಬೇಕು; ಮುಂದೆ ಇಂಥ ಬರಹಗಳು ಬರುವಂತೆ ಪ್ರೋತ್ಸಾಹಿಸಬೇಕು. ಅಂಥ ನೂರಾರು ಬರಹ ಚಿತ್ರಗಳಿಂದ ಜನತೆಯಲ್ಲಿ ನವೀನ ಆಕಾಂಕ್ಷೆ, ಅಭಿಲಾಷೆಗಳು ಬೆಳೆದು- ತಮ್ಮ ಜೀವನವನ್ನು ಬೆಳೆಯಿಸಿಕೊಳ್ಳುವ ಪ್ರಯತ್ನದಲ್ಲಿ ಅವರು ಮುಂದುವರಿಯಬೇಕು.

ಶ್ರೀಯುತರು ತಾವೂ ಚೆನ್ನಾಗಿ ವಿಷಯಗಳ ಅಭ್ಯಾಸಮಾಡಿ, ನಮ್ಮ ಜನತೆಗೆ ಇದಕ್ಕೂ ಹೆಚ್ಚಿನ ಬಗೆಯಿಂದ ತಿಳಿವನ್ನುಂಟುಮಾಡುವರು, ಮಾಡಲಿ ಎಂಬ ಆಸೆಯಿಂದ ನನ್ನೀ ನಾಲ್ಕುಮಾತುಗಳನ್ನು ಮುಗಿಸುತ್ತೇನೆ.

**10—1—50**

ಉಡುಪಿ.

ಇತಿ

**ಶಿವರಾಮ ಕಾರಂತ.**

# ಪರಿವಿಡಿ



---

ಮುಖ್ಯ ತಿದ್ದುಪಡಿ: ೪೬ನೆಯ ಪುಟದ ಕೆಳಗಿನ ಯಾದಿ ಅನಗತ್ಯ; ೯೬ನೆಯ ಪುಟದಲ್ಲಿ 'ಸತ್ಯವೆಂದೂ' ಎಂಬಲ್ಲಿ 'ಸತ್ಯವಲ್ಲವೆಂದೂ' ಸೇರಿಸಿಕೊಳ್ಳುವುದು.



ಒಂದು ಆಣೆಕಟ್ಟಿನಿಂದ ಇನ್ನೊಂದಕ್ಕೆ ಹೋಗುವ ಸಂಚಾರ ವಾಚನಾಲಯ.



ಫೊಂಟಾನಾ ಆಣೆಕಟ್ಟಿನ ಸ್ಥಳದಲ್ಲಿ ರಚಿತವಾದ ಪೂರ್ವಬಂಧಿತ ಗೃಹಗಳು.



ಬಿರುಗಾಳಿಯ ಸೂಚನೆ ಇದೆ. ಹುಲ್ಲನ್ನು ಬೇಗನೆ ಕೊಯ್ದು ಕೊಟ್ಟಿಗೆಗೆ ಒಯ್ಯಬೇಕು.

ಶ್ರೀಃ

# ಪ್ರಜಾತಂತ್ರದ ಹೆದ್ದಾರಿ.

## ಒಂದನೆಯ ಅಧ್ಯಾಯ.

### ಒಂದರಂತೆ ನೂರು.

ಟೆನಸಿ ಕಂದರದ ಯೋಜನೆಯ ವೈಜ್ಞಾನಿಕ ವೈಚಿತ್ರ್ಯವನ್ನೂ, ಮಹತ್ವವನ್ನೂ ಮಾತ್ರವೇ ತಿಳಿಸಿ ಓದುಗರನ್ನು ದಿಙ್ಮೂಢಗೊಳಿಸುವು ದಿಷ್ಟೇ ಈ ಪುಸ್ತಕದ ಉದ್ದೇಶವಲ್ಲ. ಮೊನ್ನೆ ಪಂಡಿತ ನೆಹರೂ ಟೆನಸಿ ಕಂದರವನ್ನು ಸಂದರ್ಶಿಸಲು ಹೋದಾಗ ಅವರು ಕೇಳಿದ ಮುಖ್ಯ ಪ್ರಶ್ನೆ: "ಈ ಯೋಜನೆಯಿಂದ ಜನಜೀವನದ ಮೇಲೆ ಏನು, ಎಷ್ಟು ಪರಿ ಣಾಮವಾಗಿದೆ?" ಯೆಂಬುದು. ಈ ಪ್ರಶ್ನೆಯನ್ನುತ್ತರಿಸುವುದೇ ಈ ಪುಸ್ತ ಕದ ಮುಖ್ಯ ಉದ್ದೇಶವೆಂದರೂ ಹೇಳಬಹುದು. ಯಾವ ವಿಧದ ಯೋಜ ನೆಯೇ ಆದರೂ ಜನತೆಗೆ ಒಳಿತನ್ನೆಸಗಿದರೆ ಮಾತ್ರ ಅದರ ಕೆಲಸ ಸಫಲ ವಾದೀತು. ಜನರ ಜೀವನದ ಮಟ್ಟ ಎಷ್ಟು ಎಷ್ಟು ಸುಧಾರಿಸುವುದೋ ಅಷ್ಟಷ್ಟಕ್ಕೆ ಯೋಜನೆಯ ಹಿರಿಮೆ ಅಧಿಕವಾಗುವುದು.

ಈ ದೃಷ್ಟಿಯಿಂದ ಟೆನಸಿ ಯೋಜನೆಯನ್ನು ಪರಿಶೀಲಿಸಿದರೆ ಅದು ಪ್ರಪಂಚವಲ್ಲೇ ಅಭೂತ ಪೂರ್ವವೂ, ಮಹತ್ತರವೂ ಆದ ಪ್ರಯೋಗ ವೆಂಬುದು ಸಿದ್ಧವಾಗುವುದು. ನದಿಯನ್ನು ಪಳಗಿಸುವುದಾಗಲೀ, ಸುತ್ತ ಲಿನ ಭೂಭಾಗದ ಮೇಲುಮಣ್ಣನ್ನುಳಿಸಿಕೊಳ್ಳುವ ಕೆಲಸವಾಗಲೀ, ವಿದ್ಯುದುತ್ಪಾದನೆಯಾಗಲೀ, ನದಿಯ ಮೇಲೆ ಯಾನ ಸೌಕರ್ಯ ವಾಗಲೀ—ಯೋಜನೆಗೆ ಸಂಬಂಧಿಸಿದ ಯಾವುದೇ ಕೆಲಸವಿರಲಿ—

ಎಲ್ಲಿವೂ ಜನಜೀವನದೊಡನೆ ಹಾಸುಹೊಕ್ಕಾಗಿ ಬೆರೆತು, ಬೆಳೆದು ಪಲ್ಲವಿಸಿವ ಉದಾಹರಣೆ ಜಗತ್ತಿನಲ್ಲೇ ವಿರಳ. ಆದುದರಿಂದಲೇ ಟೆನಸಿ ಯೋಜನೆಯ ಕತೆ ಎಂದರೆ ಹೊಲಗಳ ಮೇಲೆ ಧಾರಾಕಾರವಾಗಿ ಬೀಳುವ ಮಳೆ, ಸುತ್ತಲಿನ ಬೆಳೆ ಇಷ್ಟರ ಕತೆಯೇ ಅಲ್ಲ. ಅಲ್ಲಿನ ರೈತರ ಬಾಳುವೆಯ ಕತೆ, ಕಾರ್ಖಾನೆಯಲ್ಲಿ ಎಲ್ಯುಮಿನಿಯಮ್ ಹಾಳೆಯನ್ನೆಳೆಯುವ ಕಾರ್ಮಿಕರ ಕತೆ, ಹತ್ತಿಯ ಗಿರಣಿಯಲ್ಲಿ ದುಡಿಯುವ ಕೂಲಿಯವರ ಕತೆ. ಈ ಎಲ್ಲ ಕತೆಗಳ ಸಂಗಮವೇ ಟೆನಸಿ ಕಂದರದ ಪುರಾಣ. ಇಂಥ ಪುರಾಣವನ್ನು "ಹೇಳುವವರಿಗೂ, ಕೇಳುವವರಿಗೂ ಉಭಯತೋಪಿ" ಶ್ರೇಯೋಭಿವೃದ್ಧಿಯಾಗುವುದೆಂದು ನಂಬಿ ಮುಂಬರಿಯುವ, ಆಗದೆ?

ಟೆನಸಿ ಕಂದರದಲ್ಲಿ ಒಂದು ಮಹಾಪರಿವರ್ತನೆ ನಡೆದಿದೆ. ಈ ಹದಿನೈದು ವರ್ಷಗಳ ಅಲ್ಪಾವಧಿಯಲ್ಲೇ ಟೆನಸಿ ಪ್ರದೇಶದ ಸ್ವರೂಪವೇ ಬದಲಾಗಿದೆ. ಸ್ವೇಚ್ಛೆಯಿಂದ ಕಂಡ ಒಟ್ಟೆಗೆ ಹರಿಯುವ ಅಂಕೆಯಿಲ್ಲದ ನದಿ ಇಂದು ಜನಮನೋಹಾರಿಯಾದ ಹಲವಾರು ಸರೋವರಗಳಾಗಿಯೂ, ಸೌಕರ್ಯದಾಯಕವಾದ ನೌಕಾಯಾನ ಮಾರ್ಗವಾಗಿಯೂ ಕಂಗೊಳಿಸುತ್ತಿದೆ. ಕಾಡಾನೆಯಂತೆ ವಿನಾಶಕಾರಿಯಾದ ನದೀ ಪ್ರವಾಹವಿಂದು ನಿಯಂತ್ರಣಕ್ಕೊಳಗಾಗಿ ಹಗಲೂ ರಾತ್ರಿಯೂ ವಿದ್ಯುತ್ತನ್ನುಂಟುಮಾಡುತ್ತ ಜನತಾಸೇವೆಯನ್ನೊಪ್ಪಿಕೊಂಡಿದೆ. ಬಹಳ ಕಾಲ ಉತ್ತು ಬಿತ್ತು ಬಂಜರು ಬೀಳುವುವರಲ್ಲಿದ್ದ ಹೊಲಗಳಿಂದು ಪಚ್ಚೆಪೈರಿಂದ ಶೋಭಾಯಮಾನಗಳಾಗಿವೆ. ಅಂತೆಯೇ ಕಟ್ಟುಪಾಡಿಲ್ಲದೆ ಕಡಿದು ಹಾಕಲ್ಪಡುತ್ತಿದ್ದ ಅರಣ್ಯಭಾಗಗಳಲ್ಲಿಂದು ಹೃಷ್ಟಪುಷ್ಟವಾದ ಹೆಮ್ಮರಗಳೂ ಕಾದಿರಿಸಲಾದ ವಿಶಿಷ್ಟವಲಯಗಳೂ ಏಳಿಗೆ ಹೊಂದುತ್ತಿವೆ. ಒಟ್ಟಿನಮೇಲೆ ಒರಡು ನೆಲವೊಂದು ಸಜೀವವಾಗಿ ನಿಂತಿದೆ. ಇವಕ್ಕೆ ಕಾರಣ: ಯೋಜನೆಯನ್ನು ಯಶಸ್ವಿಯಾಗಿ ಮಾಡಲು ಸದಾಸರ್ವದಾ ದುಡಿಯುತ್ತಿರುವ ಕಂದರದ ಜನ; ಆ ಕಂದರದ ಜನಕ್ಕೆ ಬೆಂಬಲವಾಗಿ ನಿಂತ ನದಿ, ಅರಣ್ಯ, ಹೊಲಗಳು. ಹೀಗೆ ಜನಧನಗಳ ಉತ್ತಮ ಸಮನ್ವಯವೇ ಜಗತ್ಪ್ರಸಿದ್ಧವಾದ ಟೆನಸಿ ಕಂದರದ ಯೋಜನೆ. ಸೂಕ್ಷ್ಮವಾಗಿ ಟೀ. ವೀ. ಏ.

ಪ್ರಪಂಚದ ಜನಸಂಖ್ಯೆ ಇನ್ನೂರು ಕೋಟಿಯಾದರೂ ಜನಸಂಖ್ಯೆಯ ಅಭಿವೃದ್ಧಿಯ ವೇಗ ಹೆಚ್ಚಾಗಿದೆ. ವೈದ್ಯಕೀಯ ಸಹಾಯವೂ, ಆರೋಗ್ಯವ್ಯವಸ್ಥೆಯೂ ಪ್ರಪಂಚದ ಎಲ್ಲ ಭಾಗಗಳಿಗೂ ಸಮಾನವಾಗಿ ಹರಡಿದರೆ ಮರಣಸಂಖ್ಯೆ ಇನ್ನೂ ಕಡಮೆಯಾಗುತ್ತ ಬಂದು ಒಟ್ಟು ಜನಸಂಖ್ಯೆ ಹದಮೀರಿ ಬೆಳೆಯುವುದರಲ್ಲಿ ಸಂದೇಹವಿಲ್ಲ. ಈಗಿನ ಆಹಾರಾಭಾವವನ್ನು ನ್ಯಾಯಪೂರ್ವಕವಾದ ವಿತರಣಾವ್ಯವಸ್ಥೆಯಿಂದ ಹೋಗಲಾಡಿಸಬಹುದಾದರೂ, ದಿನಗಳೆದಂತೆ ವಿತರಣೆಯ ಬೆನ್ನಲ್ಲೇ ಉತ್ಪಾದನೆಯ ವೇಗವೂ ಹೆಚ್ಚುವುದವಶ್ಯವಾಗುವುದು. ಜನೋಪಯೋಗಕ್ಕೆ ಬೀಳುವ, ಮುಖ್ಯವಾಗಿ ಆಹಾರೋತ್ಪಾದನೆಗನುಕೂಲವಾದ ಖಾಲಿ ಸ್ಥಳಗಳ ವಿಸ್ತಾರ ಜಗತ್ತಿನಲ್ಲಿ ಅಷ್ಟೇನೂ ಅಧಿಕವಾಗಿಲ್ಲ. ಆದುದರಿಂದ ಈಗ ಸಹಸ್ರಾರು ವರ್ಷಗಳಿಂದ ಗೇಯಲ್ಪಡುತ್ತಿರುವ ಭೂಭಾಗಗಳ ಸಾರವನ್ನುಳಿಸಿಕೊಳ್ಳುವ ಕೆಲಸ ತ್ವರೆಯಾಗಿ ನಡೆಯದಿದ್ದರೆ ಕ್ರಿಸ್ತಶಕ ೨೦೦೦ದ ಸುಮಾರಕ್ಕೆ ಈಗಾಗಲೇ ಇಳಿಮುಖವಾಗಿರುವ ಮಾನವನಾಗರಿಕತೆ ಬೆಬಿಲೋನ ಐಗುಪ್ತಗಳ ಪ್ರಾಚೀನ ನಾಗರಿಕತೆಗಳಂತೆ ನಿರ್ನಾಮವಾಗುವ ಸಂಭವವೂ ಉಂಟು. ಆಫ್ರಿಕಾಖಂಡದ ಕಗ್ಗಾಡಿನಲ್ಲಿ ಜನರಿಗೆ ವೈದ್ಯಕೀಯ ಸಹಾಯವನ್ನೊದಗಿಸುತ್ತ ಜೀವದ ಆರಾಧನೆಯೇ ಲೋಕೋದ್ಧಾರದ ಮುಖ್ಯ ಸೂತ್ರವೆಂದು ನಂಬಿ ಪರಿಶ್ರಮಿಸುತ್ತಿರುವ ಮಾನವ್ಯದ ಮಹಾ ಪೂಜಾರಿಯೂ, ಆಧುನಿಕ ತತ್ತ್ವಜ್ಞಾನಿಗಳಲ್ಲಿ ಪರಮಶ್ರೇಷ್ಠನೂ ಆದ ಅಲ್ಬರ್ಟ ಶ್ವೀಟ್ಸರ್ ಹೇಳುವಂತೆ "ಈ ಹಿಂದಕ್ಕಳಿದುದು ಅಲ್ಲಲ್ಲಿ ಒಂದೊಂದು ನಾಗರಿಕತೆಯಾದರೆ, ಇಂದು ಇಡಿ ಮಾನವ ನಾಗರಿಕತೆಗೆಯೆ ಗಂಡಾಂತರ" ಬಂದೊದಗಿದೆ.

ಹೀಗಾಗಲು ನೈತಿಕ ರಾಜಕೀಯ ವೈಷಮ್ಯಗಳು ಕಾರಣವಹುದಾದರೂ, ಅವೇ ಮುಖ್ಯಕಾರಣವಲ್ಲ. ಜತೆಗೆ ಭೂಮಿಯ ಉತ್ಪಾದನೆಯ ಶಕ್ತಿ ಕುಂದುತ್ತಾಬಂದಂತೆ ಬಾಳ್ವೆಯ ಹೋರಾಟ ಇನ್ನಷ್ಟು ತೀವ್ರವಾಗಿ ರಾಜಕೀಯವೇ ಮುಂತಾದ ಕಾರಣಗಳಿಗೆ ಪುಟವಿಟ್ಟಂತಾಗುವುದು. ಆದುದರಿಂದ ಮಾನವನ ನೈತಿಕ ಮಟ್ಟವನ್ನು ಸುಧಾರಿಸಲು ಯತ್ನಿಸುವಷ್ಟೇ ಸ್ಫೂರ್ತಿಯಿಂದ ಭೂಮಿಯ ಸಾರಸುಧಾರಣೆಗೂ

ಯತ್ನಿಸಬೇಕು. ಮಾನವನ ಉದ್ಧಾರಕ್ಕೂ, ಉಳಿವಿಗೂ ಅದೆಷ್ಟು ಮುಖ್ಯವೋ ಅಷ್ಟೇ ಇದೂ ಪ್ರಾಮುಖ್ಯವಾಗಿದೆ. ಇಲ್ಲಿ ನಮ್ಮ ದೃಷ್ಟಿ ಟೀ. ವೀ. ಏ. ಕಡೆಗೆ ಹೊರಳಬೇಕು. ಟೆನಸಿ ಒಂದೇ ಪ್ರಪಂಚದಲ್ಲಿರುವ ಕಂದರವಲ್ಲ. ಯಾಂಗ್-ತ್ಸೀ, ಗಂಗಾ, ಓಬ್, ನೈಲ್, ಅಮೆಝೋನ್ ಮುಂತಾಗಿ ಇನ್ನೂ ಎಷ್ಟೋ ನದೀಕಂದರಗಳಿಲ್ಲವೆ? ಟೆನಸಿಯಲ್ಲಿ ನಡೆಯಿಸಿದ ಪ್ರಯೋಗ ಇಲ್ಲಿಯೂ ನಡೆಸಲಾರೆವೆ? ಮಳೆ ನೀರು ಕೊಂಚವೂ ನಿಲ್ಲದ ಸಪಾಟು ನೆಲವೂ. ಗೊಬ್ಬರದ ಉಪಯೋಗದಿಂದ ಹೇರಳ ಬೆಳೆಕೊಡಬಲ್ಲ ಫಲವತ್ತಾದ ಹೊಲವೂ, ನೀರು ನಿಲಿಸಿಕೊಂಡು ಭೂಮಿಯಸಾರವನ್ನು ಕಾಪಾಡುವ ಅರಣ್ಯಪ್ರದೇಶವೂ. ಪ್ರಪಂಚದಲ್ಲಿನ್ನೆಷ್ಟು ಬೇಕು? ಇಂಥ ಒಂದೊಂದು ಪ್ರದೇಶದಲ್ಲಿಯೂ, ಒಂದೊಂದು ನದಿಯಲ್ಲಿಯೂ ಟೆನಸಿಗೂ ಮಿಗಿಲಾದ ಯೋಜನೆಗಳನ್ನು ಸೃಷ್ಟಿಸಲು ಶಕ್ಯವಿದೆ. ಟೀ. ವೀ. ಏ. ಹಾಗೆಯೇ ಜನಜೀವನವನ್ನು ಊರ್ಜಿತಕ್ಕೆ ತರಲು ಸಾಧ್ಯವಿದೆ. ದೇಶ ಬೇರಾದೀತು, ಭಾಷೆ ಬೇರಾದೀತು,-ಸಂಪ್ರದಾಯ ಕಟ್ಟುಕಟ್ಟಳೆ ರೀತಿನೀತಿಗಳು ಬೇರಾದಾವು —ಆದರೆ ಜನಜೀವನದ ಉನ್ನತಿಸಾಧನೆಯ ಮಟ್ಟಿಗೆ, ಅನುಸರಿಸಬಹುದಾದ ಮಾರ್ಗದಮಟ್ಟಿಗೆ, ಟೆನಸಿಕಂದರಕ್ಕೂ ಇತರ ಕಂದರಗಳಿಗೂ ಯಾವ ಭೇದವೂ ಇಲ್ಲ. ಕಾಡು, ನೆಲ, ಜಲ,—ಈ ಮೂರಕ್ಕೆ ಏನಾಗುವುದೋ ಅದೇ ಇಡಿಯ ಪ್ರದೇಶದ ಭಾಗ್ಯನಿರ್ಣಯವನ್ನು ಮಾಡುತ್ತದೆ.

ಬರಿಯ ಒಂದು ಹದಿನೈದು ವರುಷಗಳ ಪರಿಶ್ರಮದಿಂದಲೇ ಇಂಥ ಪರಿವರ್ತನೆಯಾಗಬಲ್ಲುದಾದರೆ, ಟೀ. ವೀ. ಏ. ಉದಾಹರಣೆಯಿಂದ ಅಸಾಧ್ಯವಾದ, —ಅಲ್ಲ, ನಾವು ಅಳುಕಿನಿಂದ ಅಸಾಧ್ಯವೆಂದು ತಿಳಿಯುವ,—ಕೆಲಸಗಳೂ ಚರಿತಾರ್ಥವಾದಾವು. ತತ್ತ್ವಜ್ಞಾನಿ ವೈಟ್ ಹೆಡ್‌ನ ಮತದ ಪ್ರಕಾರ ಈ ಅರ್ಧ ಶತಮಾನದಲ್ಲಿ ನಾಗರಿಕತೆಯ ಪ್ರರೋವೃದ್ಧಿಯ ವೇಗ ಅತ್ಯಂತ ಹೆಚ್ಚಾಗಿದೆ. ನಿನ್ನೆ ಅಶಕ್ಯವಾದ ಕಾರ್ಯ ಈ ಹೊತ್ತು ಸಾಧ್ಯವಾದಂತೆ, ಇಂದು ನಮಗೆ ಅಶಕ್ಯವೆನಿಸುವ ಕಾರ್ಯ ನಾಳೆ ಸುಲಭಸಾಧ್ಯವಾಗಬಹುದು. ಇಂಥ ಶೀಘ್ರ ಪರಿವರ್ತನೆ ಇಪ್ಪತ್ತನೆಯ ಶತಮಾನದ ಒಂದು ಲಕ್ಷಣವಲ್ಲವೆ?

ಹೋದಲ್ಲೆಲ್ಲ "ನಮಗೆ ತಂತ್ರಜ್ಞರು ಬೇಕು, ನಿಪುಣರು ಬೇಕು," ಎಂದು ಸಾರುವ ಪಂಡಿತ ನೆಹರೂ ಪ್ರಕೃತ ಶತಮಾನದ ಜೀವಜೀವಾಳದ ಬೇಡಿಕೆಗೆ ದನಿಗೂಡಿಸುತ್ತಿದ್ದಾರೆ. ನಮ್ಮ ಕಣ್ಣುಗಳಿಂದು ಡೀಸೆಲ್ ಯಂತ್ರ, ಬುಲ್‌ಡೋಜರ್, ವಿದ್ಯುತ್‌ಶೊವೇಲ್, ಪ್ರಯೋಗಶಾಲೆಯ ಗಾಜಿನ ಪಾತ್ರ, ಇವುಗಳತ್ತ ತಿರುಗಬೇಕು. ಯಂತ್ರದ ತಂತ್ರದ ನೈಪುಣ್ಯವನ್ನೂ, ಆಡಳಿತೆಯ ಕಾರ್ಯಕುಶಲತೆಯನ್ನೂ ಸಂಪಾದಿಸಿದ ಜನವರ್ಗಕ್ಕೆ ಮನ್ನಣೆ ಹೆಚ್ಚಬೇಕು. ತಂತ್ರಜ್ಞರ ನೈಪುಣ್ಯದಿಂದ ಪರಿಶ್ರಮದ ಅಂಶ ಕಡಮೆಯಾಗುವುದು; ಸಾರಹೀನವಾದ ಭೂಮಿಯೂ ಶಸ್ಯಶ್ಯಾಮಲವಾಗುವುದು; ಸುಜಲವಲ್ಲದಾದ ಜಲವೂ ಸುಫಲದಾಯಕವಾಗುವುದು. ಮನಸಾ ಹರಿಯುವ ಮಹಾನದಿಗಳನ್ನೂ ಅಂಕೆಗೀಡು ಮಾಡಬಲ್ಲ ಈ ಮಾಟಗಾರರಿಗೇ ಇಂದಿನ ಯುಗದ ಪೂಜನೆ, ಆರಾಧನೆ, ಭಜನೆ ಸಲ್ಲುವುದು ಆಶ್ಚರ್ಯವಲ್ಲ.

ಇಂಥ ತಂತ್ರಜ್ಞರ ನೆರವಿನಿಂದಲೇ ಮಾನವನಿಗೆ ತನ್ನ ಕುರಿತು ಆಶೋತ್ತರವು ನೆಲೆಗೊಂಡಿದೆ. ಬಡತನವು ನಮ್ಮ ಪ್ರಾಚೀನ ಕರ್ಮವೆಂದು ಹತಾಶರಾಗುವುದು ಈಗ ಅಗತ್ಯವಿಲ್ಲ. ಬರಗಾಲ, ಮಹಾಪೂರ, ರೋಗರುಜಿನಗಳು ಅದಮ್ಯವಾದುವಲ್ಲ. ಇವು ಬಂದರೆ ಭೂತಗಳಿಗೆ ಕೋಳಿ, ಹಂದಿ ಬಲಿಕೊಡುವ ದುಷ್ಕಾಲ ಎಷ್ಟೋ ಹಿಂದೆ ಸಂದಿದೆ ಎಂದು ಎಲ್ಲರೂ ಧೈರ್ಯವಾಗಿ ತಿಳಿದಿರಬೇಕು.

ಎರಡನೆಯ ಮಹಾಯುದ್ಧಾನಂತರದ ಜಗತ್ತನ್ನು ಮೂರನೆಯ ಗಂಡಾಂತರದಿಂದ ತಪ್ಪಿಸಿ, ಪರಂಪರೆಯಿಂದ ಬಂದ ಬಡತನವನ್ನು ನಿರ್ಮೂಲಿಸುವುದು ಹೇಗೆಂಬ ಸಮಸ್ಯೆಗೆ ಅನೇಕಜನ ಅನೇಕ ಬಗೆಯಾಗಿ ಉತ್ತರಕೊಡುತ್ತಾರೆ; ಅನೇಕವಿಧವಾದ ಆದರ್ಶಸಾಧನೆಗೆ ನೂರಾರು ಮಾರ್ಗಗಳನ್ನು ಸೂಚಿಸುತ್ತಾರೆ. ಆದರೆ ಆದರ್ಶ ವಿಹಂಗಮವು ಧರೆಗಿಳಿದ ಹೊತ್ತು ಎದ್ದುಬರುವ ಪ್ರಶ್ನೆ ಎಂದರೆ ತೀರಾ ಸಾಮಾನ್ಯವಾದ, ಜನಜೀವನದ ನಿತ್ಯಕಾರ್ಯವಾಗಿರತಕ್ಕಂತಹ ಚಿಕ್ಕ ಚಿಕ್ಕ ಸಂಗತಿಗಳು: ಬಂಜರು ಬಿದ್ದ ಹತ್ತು ಎಕರೆ ಸ್ಥಳವನ್ನು ತಿರುಗಿ ಬೆಳೆಗೆ

ಯೋಗ್ಯವಾಗಿ ಮಾಡುವುದೆಂತು? ಫಲವಿಶೇಷಗಳನ್ನು ನವನವೀನವಾದ ವಿಧಾನಗಳಿಂದ ಒಣಗಿಸಿ ಹೆಚ್ಚು ಲಾಭಬರುವ ಮಾರ್ಕೆಟ್ಟಿಗೆ ಕಳುಹಿಸುವುದು ಹೇಗೆ? ಚಿಕ್ಕ ಚಿಕ್ಕ ಹಸುಳೆಗಳಿಗೂ ಬೈಸಿಕಲ್ಲು ದೊರೆಯುವಂಥ ಪಟ್ಟಣಗಳನ್ನು ಹೇಗೆ ಏರ್ಪಡಿಸುವುದು? ನೀರಾವರಿ ಕಾಲಿವೆಗಳನ್ನು ಅತಿಕಡಿಮೆ ವೆಚ್ಚದಲ್ಲಿ ರೈತರಿಗೆ ಹೇಗೆ ಪೂರೈಸಬಹುದು? ಮಲೇರಿಯಾ ಸೊಳ್ಳೆಗಳನ್ನು ನಾಶಮಾಡುವುದು ಹೇಗೆ?

ಇಂತು ಆದರ್ಶದ ಕಣ್ಣು ಮೇಲೆ ಚಾಚಿದರೂ ಕಾಲು ಭದ್ರವಾಗಿ ನೆಲದಲ್ಲೂರಿಕೊಂಡರೇನೆ ಜೀವರಕ್ಷೆಯಲ್ಲವೇ? ಆದರ್ಶವು ಕಾರ್ಯದಲ್ಲಿ ಪರಿಣಮಿಸಬೇಕು, ಇಷ್ಟು ಮಾತ್ರವೇ ಅಲ್ಲ. ಆದರ್ಶವು **ಹೇಗೆ** ಕಾರ್ಯಕ್ಕಿಳಿಯುವುದೆಂಬ ಪ್ರಶ್ನೆಯೂ ಅತ್ಯಂತ ಮಹತ್ವದ್ದಾಗಿದೆ. ನಡೆವ ಕೆಲಸದಿಂದ ಜನಕ್ಕೆ ಒಳ್ಳೆಯದೆ—ಕೆಟ್ಟದೆ? ಎಷ್ಟು ಜನಕ್ಕೊಳ್ಳಿತು? ಯಾವ ಬಗೆಯಾಗಿ ಒಳ್ಳಿತಾಗುವುದು? ಈ ಪ್ರಶ್ನೆಯ ಮೇಲೆ ಮಾನವ ಸ್ವಾತಂತ್ರ್ಯದ, ಜಾಗತಿಕ ಶಾಂತಿಯ, ಭವಿಷ್ಯ ಅವಲಂಬಿಸಿದೆ. ನೆಲವನ್ನಿಂದು ಉಳುವಾಗ, ಬೀಜ ಬಿತ್ತುವಾಗ, ಗೊಬ್ಬರ ಸೇರಿಸುವಾಗ ಶೀಘ್ರವಾಗಿ, ತಮಗೆ ಮಾತ್ರ ಅತಿ ಹೆಚ್ಚು ಬೆಳೆ ಲಭಿಸಿದರೆ ಸಾಕೆಂಬ ಒಂದೇ ಉದ್ದೇಶವೆ? ಅಥವಾ ಮುಂದಿನ ತಲೆಮಾರುಗಳ ಹಿತಕ್ಕಾಗಿ ಏನಾದರೂ ಮುಂದೆಣಿಕೆಯಿದೆಯೆ? ತಾವು ಜೀವಿಸಿರುವಷ್ಟು ಕಾಲ ಬೆಳೆ ಸಿಕ್ಕರೆ ಸಾಕೆಂಬ ಸ್ವಾರ್ಥೋದ್ದೇಶ ಮಾತ್ರವೇ ಅಲ್ಲ, ತಲತಲಾಂತರದ ವರೆಗೆ ಇದೇ ನೆಲದ ಮೇಲೆ ಮುಂದಿನ ಜನಾಂಗ ಬದುಕಬೇಕೆಂಬ ದೊಡ್ಡ ಉದ್ದೇಶವೂ ಇರಬೇಕು. ವಿಜ್ಞಾನವು ತಂದುಕೊಡುವ ಲಾಭವು ಮಾನವನಿಗೆ ಒಳ್ಳಿತನ್ನು ಮಾಡಬೇಕಾದರೆ ಇಂಥ ಒಂದು ನೈತಿಕೋದ್ದೇಶ ಇದ್ದೇ ತೀರಬೇಕು. ಅದಿಲ್ಲವಾದರೆ ಲಾಭವು ಹಾನಿಯಲ್ಲಿ ಪರಿಣಮಿಸೀತು. ಅಂಥ ಉದಾರೋದ್ದೇಶವಿರದೆ ಹೋದಲ್ಲಿ ಮಾನವ ಜನಾಂಗಕ್ಕೆ ಕೆಡುಕಾದೀತೇ ಹೊರತು ಎಳ್ಳಷ್ಟೂ ಲಾಭವಾಗದು. ಪ್ರಜಾತಂತ್ರದ ಸಂಸ್ಥೆಗಳು ನಿರ್ನಾಮವಾಗಿ, ಹೊಸ ಬಗೆಯ ಗುಲಾಮಿಗೆ ಮಾನವಜನಾಂಗ ತಲೆಕೊಟ್ಟಂತಾದೀತು.

ಈ ನೈತಿಕ ಉದ್ದೇಶವು ಸಫಲವಾಗಬೇಕಾದರೆ ಇನ್ನೆರಡು ಮುಖ್ಯ ಸೂತ್ರಗಳನ್ನು ನೆನಪಿನಲ್ಲಿಟ್ಟಿರಬೇಕು: (೧) **ಒಂದು ಪ್ರದೇಶದ ಸಂಪದಭಿವೃದ್ಧಿ ನಡೆಯಿಸುವ ಕಾಲಕ್ಕೆ ಪ್ರಕೃತಿಸಹಜವಾದ ಐಕ್ಯವನ್ನು ಸರ್ವದಾ ಪಾಲಿಸಬೇಕು.** (೨) **ಸಂಪದಭಿವೃದ್ಧಿಯ ಕಾರ್ಯದಲ್ಲಿ ಜನ ಪ್ರತ್ಯಕ್ಷವಾಗಿ ಭಾಗವಹಿಸಬೇಕು.** ತಂತಮ್ಮ ಪಾತ್ರಕ್ಕೆ ತಕ್ಕಂತೆ ಜನ ಸಹಕರಿಸುವುದಕ್ಕೆ ಸಂದರ್ಭ ಒದಗಿಸಬೇಕಾದುದು ಅತಿ ಮುಖ್ಯ. ಜನರ ಸಹಕಾರವೆಂಬ ಪ್ರಜಾತಂತ್ರದ ಮೂಲತತ್ವವೂ, ಪ್ರಕೃತಿ ಸಹಜವಾದ ಐಕ್ಯತತ್ತ್ವವೂ ಗಂಗಾಯಮುನೆಯರಂತೆ ಸಂಗಮಿಸಬೇಕು. ಇದೇ ಟೀವೀಏ ಕಲಿಸುವ ಮುಖ್ಯ ಪಾಠ. ಇಲ್ಲಿ ಮಾತಿನ ಮಲ್ಲತನಕ್ಕೆ ಪೂರ್ಣ ಬಹಿಷ್ಕಾರ; ಚಿಕ್ಕ ಕೆಲಸದ ಸಣ್ಣತನವಾದರೂ ಸರ್ವಮಾನ್ಯ. ಆದರ್ಶಗಗನಸಂಚಾರಕ್ಕಿಲ್ಲಿ ಎಡೆ ಇಲ್ಲ; ಆದರ್ಶದ ಒಂದು ಬಿಂದುವಾದರೂ ಕಾರ್ಯರೂಪಕ್ಕಿಳಿದರೆ ಅದುವೆ ಮಹತ್ ಸಾಧನೆ ಎಂಬ ಮನ್ನಣೆಯುಂಟು. ಇದೊಂದು ಪ್ರಯೋಗ, ನಿಜ. ಆದರೆ ಕನಸಿನ ಮಂಡಿಗೆಯಲ್ಲ; ಗಾಳಿಗೋಪುರವೂ ಅಲ್ಲ. ಎಲ್ಲಿಯೂ ಇಲ್ಲದ 'ಆದರ್ಶ'ಸನ್ನಿವೇಶದಲ್ಲಿ ನಡೆಯುವ ಆದರ್ಶಪ್ರಯೋಗ ಇದಲ್ಲ; ಎಲ್ಲೂ ಸಾಮಾನ್ಯವಾಗಿ ದೊರೆಯುವ ಮತ್ತು ಮೂಲತಃ ಪ್ರಜಾತಂತ್ರಾತ್ಮಕವಾದ ಪರಿಸ್ಥಿತಿಯಲ್ಲಿಯೇ ಶ್ರೀರ ನಾಟಕೀಯವೆನಿಸಿದರೂ, ಅತ್ಯಂತ ಸಹಜವಾದ ಈ ಪ್ರಯೋಗ ನಡೆದಿರುವುದು ಇದೇ ಮೊದಲ ಬಾರಿ ಎಂದರೂ ತಪ್ಪಲ್ಲ.

ಟೀವೀಏಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುದು ಉದ್ದೇಶದ ವೈಶಾಲ್ಯ ಮತ್ತು ವಿಧಾನದ ವೈಶಿಷ್ಟ್ಯ. ಇವೆರಡು ಮಹಾತತ್ತ್ವಗಳು ಟೆನಸಿಯನ್ನನುಸರಿಸುವ ಇತರ ಪ್ರಾದೇಶಿಕ ಯೋಜನೆಗಳಿಗೆ ಗಾಯತ್ರಿಯಾಗಬೇಕು. ಅದು ಮಾತ್ರವೇ ಅಲ್ಲ; ಇಂಥ ಉದ್ದೇಶ ಮತ್ತು ವಿಧಾನಗಳ ಮೇಲೆಯೇ ಜಾಗತಿಕ ಶಾಂತಿಸ್ಥಾಪನೆಯ ಪ್ರಶ್ನೆಯೂ, ವ್ಯಕ್ತಿಸ್ವಾತಂತ್ರ್ಯದ ಪ್ರಶ್ನೆಯೂ ಅವಲಂಬಿಸಿವೆ. ಅರ್ಥಶಾಸ್ತ್ರ ಮತ್ತು ಹಣಕಾಸಿನ ಪ್ರಶ್ನೆ ಇರಲಿ, ಡಾಲರ್ ಪವನಿನ ಸಂಬಂಧವಿರಲಿ, ಆರೋಗ್ಯವ್ಯವಸ್ಥೆಯಿರಲಿ, ಪ್ಲಾಸ್ಟಿಕ್, ಇಲೆಕ್ಟ್ರಾನಿಕ್, ಮುಂತಾದ

ನವೀನ ಆವಿಷ್ಕಾರಗಳಿರಲಿ, ಅಂತರ್-ರಾಷ್ಟ್ರೀಯ ಒಡಂಬಡಿಕೆಗಳೇ ಇರಲಿ — ಎಲ್ಲವೂ ಕಾಡು, ನೆಲ, ಜಲಗಳ ವಿಷಯದಲ್ಲಿ ನಾವಿಂದು ಮಾಡುವ ನಿರ್ಧಾರ ಮತ್ತು ಕೊಳ್ಳುವ ಕಾರ್ಯಕ್ರಮದ ಬೆನ್ನ ಹಿಂದೆ ಬರುವಂಥವು.



# ಅಧ್ಯಾಯ ಎರಡು.

## ಅಂಕೆಯುಳ್ಳ ಕಪಿ.

ಹದಿನೈದು ವರುಷ ಹಿಂದಿನ ಟೆನಸಿ ಕಂದರಕ್ಕೂ, ಈಗಿನ ಟೆನಸಿ ಕಂದರಕ್ಕೂ ಅಜಗಜಾಂತರವಿದೆ. ರೈತನ ಬಾವಿಗೆ ವಿದ್ಯುತ್‌ಪಂಪು, ಕೂಡುಹಾದಿಗಳಲ್ಲಿ ಒಟ್ಟು ಸಮಾಜಕ್ಕೇ ಸೇರಿದ ರಿಫ್ರಿಜರೇಟರು, ಹತ್ತಿಯ ಹೊಲವಿದ್ದ ಜಾಗದಲ್ಲಿ ಆಧುನಿಕ ಕಾರ್ಖಾನೆ, ಸಾಲುಸಾಲಾಗಿ ಕಟ್ಟಿದಂತಹ ಚೊಕ್ಕವಾದ ಮನೆ--ಇವುಗಳನ್ನು ಕಂಡಾಗ ಕಂದರದ ಜನರ ಆದಾಯವು ಹದಿನೈದು ವರುಷ ಪೂರ್ವಕ್ಕಿಂತ ಎಷ್ಟೋ ಪಟ್ಟು ಬೆಳೆದಿರಬೇಕೆಂಬುದನ್ನು ಸುಲಭವಾಗಿ ತಿಳಿಯಬಹುದು. ಗಿಡಮರಗಳ ನಡುವಿನಿಂದ ತೂರಿಕೊಂಡು, ಹುಲ್ಲುಗಾವಲುಗಳನ್ನು ದಾಟಿಕೊಂಡು, ಬೆಟ್ಟಗುಡ್ಡಗಳ ಏರುಪೇರಿನಲ್ಲಿ ಬಿದ್ದೆದ್ದು, ಎಲ್ಲೆಡೆಗೂ ಅಡ್ಡಡ್ಡವಾಗಿ ಪಸರಿಸಿರುವ ಸರ್ವಾಂತರ್ಯಾಮಿ ವಿದ್ಯುತ್‌ಸರಿಗೆಯೂ, ಆ ಸರಿಗೆಯನ್ನು ಆಧರಿಸಿ ಹಿಡಿಯುವ ಗೋಪುರಸ್ತಂಭಗಳೂ ಕಂದರದಲ್ಲೆಲ್ಲೆಲ್ಲಿಯೂ ಗೋಚರವಾಗುತ್ತವೆ. ಹದಿನೆಂಟನೆಯ ಶತಮಾನದ ಮರದ ಗೂಡಿನ ಬಳಿಯೆ ಇಪ್ಪತ್ತನೆಯ ಶತಮಾನದ ಈ ಹೆಗ್ಗಂಬ! ಅಲ್ಲೊಂದು ಇಲ್ಲೊಂದು ಕಷ್ಟದಿಂದ ಸಂಚರಿಸುವ 'ಓಡ'ದ ಬದಲು ಈಗ ನಾವು ನದಿಯ ಮೇಲೆ ಕಾಣುವುದು ದೊಡ್ಡದೊಡ್ಡ ಕಾರ್ಗೋ ಸ್ಟೀಮರುಗಳನ್ನು. ಮಣ್ಣು ಬೆರೆದು ಕೆಂಚಾದ ನದಿಯ ನೀರಿನ ಬದಲಿಗೆ ನೀಲವರ್ಣದ ಸ್ವಚ್ಛ ತಿಳಿನೀರು. ಅಲ್ಲಲ್ಲಿ ನೀರಮೇಲೆ ಬೆಟ್ಟದಂತೆ ಎದ್ದು ತೋರುವ ಒಡ್ಡುಗಳು. ಯಂತ್ರಜ್ಞನಿರಲಿ, ಶಿಲ್ಪಿ ಇರಲಿ, ತಂತ್ರಜ್ಞನಿರಲಿ ಅಥವಾ ಸಾಮಾನ್ಯ ಮನುಷ್ಯನೇ ಇರಲಿ, ಎಲ್ಲರೂ ನೋಡಿ ಮನಮೆಚ್ಚುವ ಇಂಥ ಪ್ರಸಂಗಗಳು. ಕಣ್‌ದಣಿಯ ನೋಡಿದರೂ, ಮನದಣಿಯೆ ಪರಿಕಿಸಿದರೂ, ತೃಪ್ತಿಗೊಳ್ಳದಂಥ ಸಾಹಸದ ಜೀವಂತ ಪ್ರತೀಕಗಳು! ಎಲ್ಲವೂ ಕಂದರದ ಅಭಿವೃದ್ಧಿಯ ದ್ಯೋತಕವಾಗಿವೆ.

ಆದರೆ ನಮ್ಮ ನಿಮ್ಮಂಥ ಸಾಧಾರಣ ಜನ ಟೆನಸಿಕಂದರದ ಪರಿವರ್ತನೆಯನ್ನಳೆಯುವುದು ಬೇರೆಯೇ ಮಾನದಿಂದ ತಾನೆ. ಕಂದರದಲ್ಲಿ ಹೊಸ

ಕೈಗಾರಿಕೆ ಏನು ಹುಟ್ಟಿದೆ? ಹಳೆಯ ಕೈಗಾರಿಕೆಗಳ ಪೈಕಿ ಯಾವುದರ ಪುನರುಜ್ಜೀವನವಾಗಿದೆ? ಜನರ ಕೈಯಲ್ಲಿ ಕಾಸು ಆಡುತ್ತಿದೆಯೆ? ಕರ ತೆರುವುದನ್ನು ತಪ್ಪಿಸಿಕೊಳ್ಳುವ ಹವ್ಯಾಸ ಕಡಿಮೆಯಾಗಿದೆಯೆ? ಬ್ಯಾಂಕ್‌ಗಳಲ್ಲಿ ಇಡುಗಂಟಿನ ಪ್ರಮಾಣ ಹೆಚ್ಚಿದೆಯೆ? ಅಂಗಡಿಗಳಲ್ಲಿ ಗಿರಾಕಿ ಜಾಸ್ತಿಆಗಿದೆಯೆ? ಎಂದು ಮುಂತಾಗಿ ನಾವು ಪ್ರಶ್ನಿಸುತ್ತೇವೆ. ಅಲ್ಲದೆ ಸಾರ್ವಜನಿಕ ವಾಚನಾಲಯಗಳ ವೃದ್ಧಿಯೂ, ಸಾರ್ವಜನಿಕ ಉಪವನಗಳ ಸಂಖ್ಯೆಯೂ ಹೆಚ್ಚಾಗಿದ್ದರೆ ಅಷ್ಟುಮಟ್ಟಿಗೆ ಕಂದರದ ಉನ್ನತಿಯಾಗಿದೆಯೆಂದು ನಾವು ಪರಿಗಣಿಸುತ್ತೇವೆ. ವಿದ್ಯುತ್ತಿನ ಉಪಯೋಗ ಬೆಳೆಯುತ್ತಿದ್ದರೆ, ವಿದ್ಯುತ್ ತಂತಿ ದೂರ ದೂರದ ತನಕ ಕಾಲು ಬೆಳಸಿದ್ದರೆ, ಅದನ್ನೂ ಉನ್ನತಿಯ ಚಿಹ್ನೆ ಎಂದನ್ನುತ್ತೇವೆ. ಹೊಲದ ಉತ್ಪತ್ತಿ ಹೆಚ್ಚಾಗಿದೆಯೆ? ನದಿಯಲ್ಲಿ ಸಾಗುವ ಸಾಮಾನಿನ ತೂಕ ಮತ್ತು ದೂರ ಅಧಿಕವಾಗುತ್ತಿದೆಯೆ? ಕಾಡಿನಲ್ಲಿ ಹೊಸ ಮೊಳಕೆಗಳನ್ನಿಟ್ಟಿದ್ದಾರೆಯೆ? "ದಕ್ಷಿಣದ ಮಹಾಸರೋವರ"ಗಳಲ್ಲಿ ಮೀನುಗಾರಿಕೆ ಅಭಿವೃದ್ಧಿಗೊಳ್ಳುತ್ತಿದೆಯೆ? ಎಂಬೀ ಪ್ರಶ್ನೆಗಳು ಸಾಮಾನ್ಯರ ಕುತೂಹಲವನ್ನು ಕೆರಳಿಸುತ್ತವೆ.

ನದಿಯಿಂದ ಆರಂಭಿಸಿ ನಾವು ಈ ಪ್ರಶ್ನೆಗಳನ್ನು ಒಂದೊಂದಾಗಿ ಬಿಡಿಸಲು ಯತ್ನಿಸುವ. ಸರಿ, ಇನ್ನು ನದಿಯ ಕತೆ.

ಮುಖ್ಯನದಿ ಟೆನಸಿ. ಅದಕ್ಕೆ ಸಾಧಾರಣ ದೊಡ್ಡದಾದ ಐದು ಶಾಖೆಗಳು—ಫ್ರೆಂಚ್‌ಬ್ರೋಡ್, ಹೋಲ್‌ಸ್ಟನ್, ಹಿವಾಸಿ, ಲಿಟ್ಲ್ ಟೆನಸಿ. ನದಿಯ ಪಾತ್ರದಮೇಲೆ ಬೀಳುವ ಮಳೆಯ ಪ್ರಮಾಣ ಅಮೇರಿಕದಲ್ಲೇ ದೊಡ್ಡದು. ಆದ್ದರಿಂದ ನದಿಯಲ್ಲಿ ತುಂಬುವ ನೀರಿನ ಪ್ರಮಾಣವೂ ದೊಡ್ಡದೇ. ಒಟ್ಟು ಪಾತ್ರದ ಗಾತ್ರ ೪೧,೦೦೦ ಚದರ ಮೈಲು. ವರ್ಜೀನಿಯಾ, ಟೆನಸಿ, ನಾರ್ಥ್ ಕೆರೊಲಿನಾ, ಜಾರ್ಜಿಯಾ ಈ ನಾಲ್ಕು ಪ್ರಾಂತಗಳಲ್ಲಿ ಉಗಮಸ್ಥಾನ. ಹೋಲ್ಸ್‌ಟನ್ ಮತ್ತು ಫ್ರೆಂಚ್ ಬ್ರೋಡ್ ಸಂಗಮವಾಗುವಲ್ಲಿ ನಾಕ್ಸ್‌ವಿಲೆಯ ಹತ್ತಿರ, ಮುಖ್ಯ ಟೆನಸಿ ನದಿ ತೊಡಗುವುದು. ಅಲ್ಲಿ ನದಿಯ ಎತ್ತರ ಸಮುದ್ರ ಮಟ್ಟಕ್ಕಿಂತ ೮೦೦ಅಡಿ ಹೆಚ್ಚು; ಅತಿ ತಗ್ಗೀನದ ಪದುಕದಲ್ಲಿ—೩೦೦ ಅಡಿ. ಮುಸಲ್

ಫೋಲ್ಸ್‌ನಲ್ಲಿ ನೂರಡಿಯ ಪ್ರಪಾತವಿದ್ದರೆ, ಬಾಕಿ ಇಳಿತ ನದಿಯಲ್ಲಿ ಸಾರ್ವತ್ರಿಕವಾಗಿ ಹರಡಿದೆ. ವಾರ್ಷಿಕ ಮಳೆ—ಸರಾಸರಿ ೫೨ ಅಂಗುಲ. ಒಂದೊಂದು ವರುಷ ಇದು ೬೩ ಆದುದೂ ಉಂಟು; ಇನ್ನು ಕೆಲವು ವರ್ಷ ೩೭ ಆದುದೂ ಉಂಟು. ಉಗಮಸ್ಥಾನದಲ್ಲಿ ಇದಕ್ಕೂ ಹೆಚ್ಚಿನ ಮಳೆ ಬೀಳುತ್ತದೆ. ಅಲ್ಲಿ ಸರಾಸರಿ ೮೫ ಅಂಗುಲ ಬಿದ್ದರೂ ಕೇಳಬಾರದು.

ಟೆನಸಿ ಕಂದರವಗಲಕ್ಕೂ ಅತಿವೃಷ್ಟಿ ಸುರಿಸಿ, ಭಯಂಕರವಾದ ನೆರೆಹಾವಳಿ ಎಬ್ಬಿಸುವ ಬಿರುಗಾಳಿ ಬೀಸುವುದು ಮೆಕ್ಸಿಕೋ ಕೊಲ್ಲಿಯಿಂದ. ಅದು ಕಂದರವನ್ನು ಪ್ರವೇಶಿಸುವುದು ಸಾಧಾರಣವಾಗಿ ಪಡುವಣದಿಂದ. ದಶಂಬರದಿಂದ ತೊಡಗಿ ಎಪ್ರಿಲ್ ವರೆಗೆ ಕಾರ್ಮುಗಿಲು ಕಂದರವನ್ನು ಕವಿದಿರುತ್ತದೆ. ಆದರೆ ಸ್ವಲ್ಪವೇ ಸ್ಥಳದ ಮೇಲೆ ಹಾದರೂ, ಅತ್ಯಧಿಕವಾಗಿ ಹೂಲಿ ಎಬ್ಬಿಸುವ ಮುಂಗಾರು ಗಾಳಿ ಬೀಸುವುದು ಜೂನ್ ೧ರಿಂದ ಅಕ್ಟೋಬರ ೧೫ರ ತನಕ.

ಟೆನಸಿಗೆ ಹರಿಯಲು ಒಂದೇ ದಿಕ್ಕಲ್ಲ; ಮೂರು. ಅದು ಮೊದಲು ತೆಂಕುದಿಕ್ಕಿಗೆ ಹರಿದು, ನಡುವೆ ಪಡುವಣಕ್ಕೆ ತಿರುಗಿ, ಮತ್ತೆ ಬಡಗಲಿಗೆ ಮೋರೆಮಾಡುವುದು. ನಾಕ್ಸ್‌ವಿಲೆಯಿಂದ ೬೫೦ ಮೈಲು ಹರಿದು ದಾರಿಯಲ್ಲಿ ಪೂರ್ವ ಸಂ. ರಾಷ್ಟ್ರದಲ್ಲಿನ ಅತ್ಯುನ್ನತ ಶಿಖರಗಳ ದರ್ಶನ ಮಾಡುತ್ತಾ, ಕೆಂಟುಕಿ ಪ್ರಾಂತ್ಯದ ಬಯಲು ಭೂಮಿಗೆ ಸೇರಿ, ಇಲ್ಲಿ ನೊಯ್ಸ್ ಪ್ರಾಂತ್ಯದ ಹೊಲಗಳ ದೂರ ನೋಟವನ್ನೂ ಪಡೆಯುವ ಭಾಗ್ಯ ಟೆನಸಿಗುಂಟು.

ಟೆನಸಿ ನದಿಯ ಕಂದರವು ನಾರ್ಥ್ ಕೆರೊಲಿನಾ, ವರ್ಜಿನಿಯಾ, ಜಾರ್ಜಿಯಾ, ಅಲಬಾಮಾ, ಮಿಸಿಸಿಪಿ, ಕೆಂಟುಕಿ, ಟೆನಸಿ ಎಂಬ ಏಳು ಸಂಸ್ಥಾನಗಳಲ್ಲಿ ಹರಡಿದೆ. ವಿಸ್ತಾರದಲ್ಲಿ ಸುಮಾರು ಇಂಗ್ಲಂಡ ಮತ್ತು ಸ್ಕಾಟ್ಲಂಡಗಳಷ್ಟಿದ್ದು ೪೫ ಲಕ್ಷ ಜನಸಂಖ್ಯೆಯುಳ್ಳದ್ದಾಗಿದೆ.

ಕಂದರದ ಈ ಇಷ್ಟು ಪ್ರದೇಶದಲ್ಲಿ ಒಟ್ಟು ೨೧ ಅಣೆಕಟ್ಟುಗಳಿವೆ. ಮುಖ್ಯ ನದಿಯ ಮೇಲೆ ಒಂಭತ್ತು, ಉಪನದಿಗಳ ಮೇಲೆ ೧೨. ಇದ

ರೊಂದಿಗೆ ಅಮೆರಿಕನ್ ಅಲ್ಯುಮಿನಿಯಮ್ ಕಂಪೆನಿಯೊಡನೆ ಒಡಂಬಡಿಕೆ
ಯಾವ ತರುವಾಯ ಸೇರಿದ ಲಿಟಲ್ ಟೆನಸಿಯ ಮೇಲಿನ ಐದನ್ನೂ
ಸೇರಿಸಿದರೆ, ಟೀವೀಏಯಲ್ಲಿ ಒಟ್ಟು ೨೬ ಅಣೆಕಟ್ಟುಗಳಾಗುತ್ತವೆ. ಇಪ್ಪ
ತ್ತಾರೂ ಒಂದೇ ಒಂದು ಪದ್ಧತಿಗೊಳಗಾಗಿ ನಡೆಯಿಸಲ್ಪಡುವಂಥವಿದು
ಪ್ರಪಂಚದಲ್ಲೇ ಅತಿ ದೊಡ್ಡ ನದೀಯೋಜನೆಗಳಲ್ಲೊಂದಾಗಿ ಪರಿಣಮಿ
ಸಿವೆ. ಅಮೇರಿಕದ ಇತಿಹಾಸದಲ್ಲಿ ಒಂದೇ ಒಂದು ಸಂಸ್ಥೆ ಇಷ್ಟು
ದೊಡ್ಡ ಶಿಲ್ಪದ ಮತ್ತು ರಚನೆಯ ಕೆಲಸ ಕೈಗೊಂಡದ್ದು ಇದೇ ಮೊದಲು.

ಇಪ್ಪತ್ತಾರು ಅಣೆಕಟ್ಟುಬರಿಯ ಸಂಖ್ಯೆಯ ದೃಷ್ಟಿಯಿಂದಲೇ ನಮ್ಮ
ನ್ನು ಬೆರಗುಗೊಳಿಸುವುದಂತಿರಲಿ; ಯಥಾರ್ಥವಾಗಿ ಈ ಅಣೆಕಟ್ಟುಗಳ
ರಚನೆಯ ಸಮಯ ಎಷ್ಟುಜನ, ಎಷ್ಟುಕಾಲ ದುಡಿದಿರಬೇಕೆಂಬುದನ್ನೂ,
ಈಗ ಸರೋವರಗಳಿಂದ ತುಂಬಿ ಹೋದ ೧೬೫,೦೦೦ ಎಕರೆ ಭೂಪ್ರದೇಶ
ವನ್ನು ಸರಿಪಡಿಸಲು ಅವರೆಷ್ಟು ದಣಿದಿರಬೇಕೆಂಬುದನ್ನೂ,೧೨೮೦ಮೈಲು
ರಸ್ತೆ ಮತ್ತು ನೂರು ಮೈಲು ರೈಲು ಹಾದಿಯನ್ನು ನಿರ್ಮಿಸಲು ಅವ
ರೆಷ್ಟು ಬೆವರು ಸುರಿಸಿರಬಹುದೆಂಬುವನ್ನೂ, ೧೧೩ ಮಿಲಿಯ ಘನಗಜ
ಕಾಂಕ್ರೀಟು ಸುರುವಲು ಎಷ್ಟು ಶಕ್ತಿ ವ್ಯಯವಾಗಿರಬಹುದೆಂಬುದನ್ನೂ
ಸ್ಮರಿಸಿದರೆ ಬರಿಯ ಬೆರಗೊಂದೇ ಏಕೆ? ದುಡಿಮೆಗಾರರ ಮಹತೋ
ಮಹೀಯವಾದ ಕರ್ತೃತ್ವಶಕ್ತಿಯ ಕುರಿತೂ, ಅದರಿಂದ ಬರುವ ಸುಪರಿ
ಣಾಮದ ಕುರಿತೂ, ಒಂದು ತೆರನಾದ ಪೂಜ್ಯಭಾವನೆ ನಮ್ಮಲ್ಲಿ ಮೊಳೆ
ಯುವುದಿಲ್ಲವೆ?

ಈ ಅಂಕೆ ಸಂಖ್ಯೆಗಳ ಸಂಪೂರ್ಣ ಪರಿಜ್ಞಾನವಾಗಬೇಕಾದರೆ
ಕೆಲವು ಹೋಲಿಕೆಗಳನ್ನು ನೋಡಬೇಕು. ೧೧೩ ಮಿಲಿಯ ಘನಗಜ
ವೆಂದರೆಷ್ಟು? ಟೀವೀಏ ಆಣೆಕಟ್ಟುಗಳಿಗೆ ಸುರುವಿದ ಕಾಂಕ್ರೀಟೊಂದೇ
ಪನಾಮಾ ಕಾಲುವೆಯ ಸರ್ವಸ್ವಕ್ಕೂ ಉಪಯೋಗಿಸಲಾದ ಕಾಂಕ್ರೀಟಿ
ಗಿಂತ ಎರಡೂವರೆ ಪಟ್ಟುಜಾಸ್ತಿ: ಬೌಲ್ಡರ್ ಆಣಿಕಟ್ಟಿಗೆ ಹಾಕಿ
ದ್ದಕ್ಕಿಂತ ನಾಲ್ಕು ಪಾಲು; ಗ್ರ್ಯಾಂಡ್ ಕೌಲಿ ಆಣೆಕಟ್ಟಿಗೆ ಹಾಕಿದದಕ್ಕಿಂತ
೧,೭೦೦,೦೦೦ ಘನಗಜ ಹೆಚ್ಚು: ಇದರಿಂದ ರಶಿಯಾದ ನೀಪರ್

ಅಣೆಕಟ್ಟೆನಂಥವು ಏಳನ್ನು ಕಟ್ಟಬಹುದು. ಬೌಲ್ಡರನ್ನು ಕಟ್ಟಲು ಕಟ್ಟೋಣದ ಆರು ಕಂಟ್ರಾಕ್ಟ್ ಸಂಸ್ಥೆಗಳು ಐದು ವರ್ಷ ಕಾಲ ಕೆಲಸ ಮಾಡಬೇಕಾಯಿತು. ಗ್ರಾಂಡ್ ಕೌಲಿಗೆ ಎಂಟು ವರ್ಷ ತಗಲಿತು; ಹತ್ತು ಸಂಸ್ಥೆಗಳು ಅದರಲ್ಲಿ ನಿರತವಾಗಿದ್ದುವು. ಟೆನಸಿ ಕಂದರದ ಅಣೆ ಕಟ್ಟುಗಳಲ್ಲುಪಯೋಗಿಸಿದ ಸಾಮಗ್ರಿಯಿಂದ ಮೂವತ್ತೈದು ಬೌಲ್ಡರ್ ಅಣೆಕಟ್ಟುಗಳನ್ನೂ, ಅಥವಾ ಹತ್ತು ಗ್ರಾಂಡ್ ಕೌಲಿಗಳನ್ನೂ ಕಟ್ಟಬಹುದಾಗಿತ್ತು. ಅಲ್ಲದೆ ಈ ಕಂದರದ ಎಲ್ಲ ಕೆಲಸವು ಒಂದೇ ಒಂದು ಸಂಸ್ಥೆಯ ಮೂಲಕ ನಡೆದುದು ಟೆನಸಿಯೋಜನೆಯ ಇನ್ನೊಂದು ಮಹತ್ವದ ವೈಶಿಷ್ಟ್ಯ. ೧೯೪೨ನೆಯ ಸಾಲಿನಲ್ಲಿ ಒಂದು ಕಡೆ ಹನ್ನೆರಡು ಅಣೆಕಟ್ಟುಗಳನ್ನು ಹೊಸದಾಗಿ ಕಟ್ಟುತ್ತಲೂ, ಹಳೆಯ ನಾಲ್ಕನ್ನು ರಿಪೇರಿ ಮಾಡುತ್ತಲೂ, ಇನ್ನೊಂದು ಕಡೆ ಸಂ. ರಾ. ದ ದಕ್ಷಿಣ ಭಾಗದ ಅತಿ ದೊಡ್ಡ ವಿದ್ಯುತ್ ಕಾರಖಾನೆಯನ್ನು ನಿರ್ಮಿಸುತ್ತಲೂ, ಮತ್ತೊಂದು ಕಡೆ ರಾಸಾಯನಿಕ ಮತ್ತು ಯುದ್ಧ ಸಾಮಗ್ರಿಗಳ ಹೊಸಹೊಸ ಉದ್ಯಮಗಳ ನ್ನಾರಂಭಿಸುತ್ತಲೂ ಇದ್ದಾಗ, ಟೀವೀಏಯ ಕೆಲಸಗಾರರ ಸಂಖ್ಯೆ ೪೦,೦೦೦ಕ್ಕೆ ಮುಟ್ಟಿರಬಹುದು.

ಇದರ ಪರಿಣಾಮವಾಗಿ ನದಿ ಈಗ ಒಂದು ದೊಡ್ಡ ಜಲಮಾರ್ಗ ವಾಗಿದೆ. ೧೯೨೮ ರಲ್ಲಿ ೪೬ ಮಿಲಿಯ ಟನ್–ಮೈಲೂ, ೧೯೩೩ ರಲ್ಲಿ ೩೨ ಮಿಲಿಯ ಟನ್-ಮೈಲೂ ಈ ಜಲಮಾರ್ಗದಲ್ಲಿ ಪ್ರಯಾಣಮಾಡಿದ್ದರೆ ೧೯೪೨ರಲ್ಲಿ ಅದು ೧೬೧ ಮಿಲಿಯ ಟನ್ ಮೈಲಿಗೆ ಏರಿರುವುದು. ಮುಖ್ಯ ವಾಗಿ ಪೆಟ್ರೋಲಿಯಮ್ ಉತ್ಪತ್ತಿಗಳೂ, ಕಲ್ಲಿದ್ದಲು ಕೋಕ್‌ಗಳೂ ಸಂಚರಿಸುವುವು. ೧೯೪೫ರಲ್ಲಿ ಅತ್ತಿತ್ತ ಸಂಚರಿಸಿದ ತೈಲಯಂತ್ರಗಳ ದೂರ–ತೂಕವು ಸುಮಾರು ಮೂರುಮಿಲಿಯ ಟನ್‌ಮೈಲಿಗೂ ಮಿಕ್ಕಿತ್ತು. ಕಟ್ಟೋಣಕ್ಕೆ ಬೇಕಾಗುವ ಆಸ್ಫಾಲ್ಟ ಮಾದರಿಯ ಸುಣ್ಣದ ಕಲ್ಲನ್ನು ಇದೇ ಜಲಮಾರ್ಗದಿಂದ ಮುಟ್ಟಲು ಮೊನ್ನೆ ಮೊನ್ನೆ ೧೯೪೭ರಿಂದ ಸಾಧ್ಯವಾಗಿದೆ.

ಹೊಸ ಮಾದರಿಯ ನೌಕಾಯಾನಗಳೀಗ ಟೆನಸಿ ಜಲಮಾರ್ಗದಲ್ಲಿ

ಓಡಾಡುತ್ತಿವೆ. ಮಾರ್ಕ್‌ಟ್ವೇನನ ಯುಗದ ಮುಂದಗಾಮಿ ಸಾವಾಸು ಜೋಣಿಯ ಬದಲು "ಕಮರ್ಶಿಯಲ್ ಕ್ಲಿಪರ್" "ಕಮರ್ಶಿಯಲ್ ಎಕ್ಸ್‌ಪ್ರೆಸ್" ಮುಂತಾದ ನವೀನ ರಚನೆಯ ಸ್ಟೀಮರುಗಳು ಬಂದಿವೆ. ಇವುಗಳಲ್ಲಿ ಒಂದೊಂದರಲ್ಲಿ ಆರುನೂರು ಮೋಟಾರುಬಂಡಿಗಳನ್ನಿಡು ವಷ್ಟು ಸ್ಥಳವಿದ್ದು, ಇವು ತಾಸಿಗೆ ೧೭ ಮೈಲಿನಷ್ಟು ವೇಗದಲ್ಲಿ ಚಲಿಸ ಬಲ್ಲವು. ಮೋಟಾರುಬಂಡಿಗಳನ್ನು ಸ್ಟೀಮರಿನೊಳಕ್ಕೆ ಇರಿಸುವುದಾ ದರೂ ಹೆಚ್ಚು ಕಷ್ಟದ ಕೆಲಸವಲ್ಲ. ಬರಿಯ ನಾಲ್ಕು ತಾಸುಗಳಲ್ಲಿ ೬೦೦ ಬಂಡಿಗಳನ್ನು ಸ್ಟೀಮರಿನೊಳಕ್ಕೆ ಹೇರಿಬಿಡುವ ಏರ್ಪಾಡಿದೆ. ಜಲ ಮಾರ್ಗವು ೧೯೪೫ರಲ್ಲಿ ಸಂಪೂರ್ಣವಾದಾಗ ಮಾಲು ಕಳಿಸುವ ವರ್ತಕ ರಿಗೆ ವರ್ಷಕ್ಕೆ ಸುಮಾರು ೩॥ ಮಿಲಿಯ ಡಾಲರು ಉಳಿತಾಯವಾಯಿತು.

ನಿನ್ನೆ ಸಿನ್ನೆ ಹತ್ತಿಮಾರುವ ಚಿಕ್ಕ ಚಿಕ್ಕ ಕೇಂದ್ರಗಳಾಗಿದ್ದ ಪಟ್ಟಣಗ ಳಿಂದು ವಿಶೇಷ ಕಾರ್ಯಾವಸರದ ನದಿಬಂದರುಗಳಾಗಿವೆ. ನಿರ್ಯಾತ ಸೌಕರ್ಯ ಹೆಚ್ಚಿದಂತೆ ಜಲಮಾರ್ಗದ ದಂಡೆಗುಂಟ ಹೊಸ ಕೈಗಾರಿಕೆ ಗಳು ತಲೆ ಎತ್ತುತ್ತಿವೆ. ಧಾನ್ಯಾರೋಹಕಗಳು, ಹಿಟ್ಟಿನ ಗಿರಣಿಗಳು, ಎಣ್ಣೆಯ ಕೊನೆನಿಲ್ಮನೆಗಳು, ಸೇರಿ ಸಾವಿರಾರು ಜನಕ್ಕೆ ಕೆಲಸ ಒದಗಿಸು ತ್ತಿವೆ. ಟೀವೀಏಯ ಸಾರ್ವಜನಿಕ ಕೊನೆನಿಲ್ಮನೆಗಳಲ್ಲಿ ೧೯೪೭ರಲ್ಲಿ ಒಟ್ಟು ೨೨,೦೦೦ ಟನ್ ಭಾರದ ಮಾಲು ಸಾಗಿತು. ಸ್ಟೀಮರುಗಳು ಇನ್ನೂ ಹೆಚ್ಚಾಗಿ, ದರ ಕಡಿಮೆಯಾದಂತೆ ಜಲಮಾರ್ಗದ ಉಪಯೋಗ ಇನ್ನಷ್ಟು ಹೆಚ್ಚುವುದರಲ್ಲಿ ಸಂದೇಹವಿಲ್ಲ. ಇತರ ನದಿಗಳಲ್ಲಿನ ಅನುಭ ವದ ಮೇರೆಗೆ ಜಲಮಾರ್ಗಸೌಕರ್ಯದ ಪೂರ್ಣ ವಿಕಾಸವಾಗುವಾಗ ಅದರಲ್ಲಿನ ವಾರ್ಷಿಕ ಆಯಾತ—ನಿರ್ಯಾತಗಳು ೭ ಮಿಲಿಯ ಟನ್ ಆಗ ಬೇಕು; ಇದರಿಂದುಂಟಾಗುವ ಉಳಿತಾಯ ವರ್ಷಕ್ಕೆ ೯ ಮಿಲಿಯ ಡಾಲ ರಿಗೇರಬೇಕು.

ಅಣೆಕಟ್ಟಿನ ಬೆಂಗಡೆ ನಿರ್ಮಾಣವಾಗುವ ಜಲಾಶಯಗಳಲ್ಲಿ ಅನೇಕ ವಿಧದ ವಿಹಾರ ನೌಕೆಗಳು ಚಲಿಸುತ್ತವೆ. ಸಂಯುಕ್ತ ರಾಷ್ಟ್ರದ ಪೆಸಿ ಫಿಕ್ ಮತ್ತು ಅಟ್ಲಾಂಟಿಕ್ ಸಮುದ್ರ ಕರಾವಳಿಗೂ ಮಿಗಿಲಾಗಿ, ನದಿಯ

೯೦೦೦ ಮೈಲುದ್ದದ ಕರೆಯಲ್ಲಿ ಜನರ ವಿರಾಮವಿಹಾರಗಳಿಗೆ ಎಡೆಯುಂಟು. ವೈಜ್ಞಾನಿಕ ವಿಧಾನಗಳನ್ನು ಪಯೋಗಿಸುವುದರಿಂದ ಜಲಾಶಯಗಳಲ್ಲಿ ಸಿಗುವ ಮೀನಿನ ಪ್ರಮಾಣ ನಾಲ್ವತ್ತು ಪಟ್ಟಾಗಿಯೂ, ಪ್ರವಹಿಸುವ ನದಿಯಲ್ಲಿನ ಪ್ರಮಾಣ ಹದಿನೈದು ಪಟ್ಟಾಗಿಯೂ, ಬೆಳೆದಿದೆ. ೧೯೪೫ರಲ್ಲಿ ಆರು ಮಿಲಿಯ ರಾತಲು ಊಟದ ಮೀನು ದೊರೆಯಿತು. ಇಪ್ಪತ್ತೈದು ಮಿಲಿಯ ರಾತಲಿನಷ್ಟು ಬೆಳೆಯಲು ಅವಕಾಶವುಂಟು. ಅಲ್ಲದೆ ಸೀಕೋರ್ಳಿ, ಬಾತುಗಳ ಸಾಕಣೆಯೂ ಸಾಕಷ್ಟು ಬೆಳೆದಿದೆ.

ಟೆನಸಿ ಕಂದರದ ಜನ ಈ ಅಣೆಕಟ್ಟುಗಳನ್ನು ಕಟ್ಟುವುದಕ್ಕೆ ಮೊದಲು ನೆರೆಯ ಉಪಟಳ ಹೇಳಿತೀರದು. ಹಳ್ಳಿ ಎಂದಿಲ್ಲ, ಪಟ್ಟಣವೆಂದಿಲ್ಲ, ಹೊಲವೆಂದಿಲ್ಲ, ರೈಲುಹಳಿ ಎಂದಿಲ್ಲ, ಎಲ್ಲವೂ ನೆರೆಹಾವಳಿಗೆ ಸಿಲುಕಿ ಹಾಳಾಗುವುದು ಪ್ರತಿ ವರ್ಷವೂ ತಪ್ಪಿದ್ದಲ್ಲ. ವರ್ಷ ವರ್ಷ ಸಂಭವಿಸುವ ಈ ಅಪಾಯದಿಂದ ಈಗ ಕಂದರದ ಜನರಿಗೆ ರಕ್ಷೆ ದೊರಕಿದೆ. ಇನ್ನು ಎಷ್ಟು ದೊಡ್ಡ ಮಹಾಪೂರ ಬಂದರೂ ಚಿಂತೆಯಿಲ್ಲ. ಒಡ್ಡುಗಳನ್ನು ಕಟ್ಟಿದರಿಂದ ಬರುವ ಸುರಕ್ಷೆ ಕಂದರದೊಳಕ್ಕೆ ಮಾತ್ರ ಸೀಮಿತವಾಗಿಲ್ಲ. ಓಹಿಯೋ ಮತ್ತು ಮಿಸಿಸಿಪಿ ನದಿಗಳಲ್ಲಿಯೂ ನೆರೆಹಾವಳಿ ಕಡಿಮೆಯಾಗಲು ಟೆನಸಿಯ ನಿಯಂತ್ರಣ ವ್ಯವಸ್ಥೆ ಕಾರಣವಾಗಿದೆ

ನೆರೆಯನ್ನು ನಿಯಂತ್ರಿಸುವ ವಿಧಾನ ಹೇಗೆಂದು ಪರೀಕ್ಷಿಸುವ. ೧೯೪೮ರಲ್ಲಿ ದೊಡ್ಡ ನೆರೆ ಬಂದು, ಉಪನದಿಗಳಲ್ಲಿ ನೀರು ತುಂಬಿ ಬಂತು. ಟೀವಿಎಯ ಕೇಂದ್ರ ನಿಯಂತ್ರಣ ಕಾರ್ಯಾಲಯದಿಂದ ಒಡನೆ ಅಪ್ಪಣೆ ಹೊರಟಿತು. ನಾರ್ಥ್ ಕೆರೊಲಿನಾದ ಕಗ್ಗಾಡಿನಲ್ಲಡಗಿರುವ ಹಿವಾಸಿ ಅಣೆಕಟ್ಟಿನ ಕಂಟ್ರೋಲ್ ರೂಮನ್ನು "ಹಿವಾಸಿ ನದಿಯ ನೀರನ್ನೆಲ್ಲ ಹಿಂದೆ ಹಿಡಿದುಕೊಳ್ಳಿ. ಟೆನಸಿಗದು ಬರುವುದು ಬೇಡ" ಎಂಬರ್ಥದ ಅಪ್ಪಣೆ ಮುಟ್ಟಿದ್ದೇತಡ ಅಲ್ಲಿನ ಒಬ್ಬ ಒಪರೇಟರ್ ಒಂದು ಗುಂಡಿಯನ್ನೊತ್ತಿದ. ಉಕ್ಕಿನ ಬಾಗಿಲು ಮುಚ್ಚಿಕೊಂಡವು. ಉಪನದಿಯ ನೀರಿನ ಪ್ರವಾಹ ನಿಂತು ಬಿಟ್ಟಿತು. ಹೊಲ್ಸ್ಟನ್ ನದಿಯ ಮೇಲಿನ ಚೆರೋಕಿ ಅಣೆಕಟ್ಟಿಗೆ "ಹೊಲ್ಸ್ಟನ್ ಹರಿವನ್ನು ನಿಲ್ಲಿಸಬೇಕು" ಎಂಬ ಅಪ್ಪಣೆ ಹೊರ

ಟಿತು. ಹಾಗೆಯೆ ಚಟ್ಟನೂಗದ ಸಮೀಪದಲ್ಲಿರುವ (ವಿಶೇಷ ಅಪಾಯದ) ಕೈಗಾರಿಕೆಯ ಕೇಂದ್ರದ ಬಳಿಯೇ ಇರುವ ಚಿಕ್ಕಮೊಗ ಅಣೆಕಟ್ಟೆಗೆ "ಮೇಲಿಂದ ಬರುವ ನೀರಿಗೆ ತೆರಪುಮಾಡಲು ಇದ್ದ ನೀರನ್ನು ಹೊರಕ್ಕಟ್ಟ ಬೇಕು" ಎಂಬ ಆಜ್ಞೆ ಕಳಿಸಲಾಯಿತು. ಅಪಾಯ ಸಂಪೂರ್ಣವಾಗಿ ನಿಲ್ಲುವ ವರೆಗೆ ಪ್ರತಿಯೊಂದು ಅಣೆಕಟ್ಟೆನಿಂದಲೂ ನಿಯಂತ್ರಣದ ಕೆಲಸ ಸಾಗಿತು. ಒಂದೊಂದು ಉಪನದಿಯ ಹರಿವಿನ ಪ್ರಮಾಣವೂ ಅಂಕೆಗೆ ಈಡಾಯಿತು. ಟೆನಸಿ ನದಿಯಲ್ಲಿ ನೆರೆಇಲ್ಲ, ಹಾವಳಿ ಇಲ್ಲ, ಗಲಭೆಇಲ್ಲ, ಕೆಲಸಕ್ಕೆ ತಡೆತೊಡರುಗಳಿಲ್ಲ. ಕಂದರವನ್ನು ಹಾಳುಗೆಡಹುವ ಸ್ವಭಾವದ ನೀರು ಯಥಾರ್ಥವಾಗಿ ಟರ್ಬೈನುಗಳ ಮೂಲಕ ಹಾದು ಜನೋಪಯೋಗಿ ವಿದ್ಯುತ್ತಾಗಿ ಪರಿಣಮಿಸಿತು.

ಜಲನಿಯಂತ್ರಣವನ್ನು (೧) ಬಹುಕಾಲದ ನಿಯಂತ್ರಣವೆಂದೂ (೨) ದಿನವಹಿ ನಿಯಂತ್ರಣವೆಂದೂ, ಇಬ್ಬಗೆಯಾಗಿ ವಿಭಜಿಸಬಹುದು. ನೆರೆಯನ್ನು ಅಂಕೆಗೆ ತರುವುದಕ್ಕೆ ಬೇಕಾದ ಶೇಖರಣೆಗೆ ಅವಕಾಶವನ್ನು ಕಲ್ಪಿಸುವುದೂ, ವಿದ್ಯುದುತ್ಪಾದನೆಗೆ ನೆರವಾಗುವುದೂ, ಬಹುಕಾಲದ ನಿಯಂತ್ರಣದ ಇಮ್ಮುಖ ಧೋರಣೆ. ನೆರೆಯ ನಿಯಂತ್ರಣದ ಬಗ್ಗಾಗಿ ಜಲಾಶಯವು ಇದಕ್ಕಿಂತ ಹೆಚ್ಚು ಎತ್ತರಕ್ಕೇರಬಾರದು ಎಂದು ಮಿತಿಯನ್ನು ಸೂಚಿಸುವ ರೇಖಾಚಿತ್ರವೊಂದು ತಯಾರಾಗಿರುತ್ತದೆ. ನೆರೆಯನ್ನು ನಿಯಂತ್ರಿಸುವಾಗ ಮಾತ್ರ ಈ ಎತ್ತರವು ಅಧಿಕವಾಗಬಹುದು. ಪ್ರತಿಯೊಂದು ಜಲಾಶಯದ ಎತ್ತರವೂ ಅನುಭವದಿಂದ ಪರಿಗಣಿಸಲ್ಪಟ್ಟಿರುವುದು. ಮಳೆಬೀಳುವ ಪ್ರದೇಶದಲ್ಲಿರುವ ಸುಮಾರು ೧೫೦ ನಿಲುಮನೆಗಳಿಂದ ಟೆಲಿಫೋನ್ ಮತ್ತು ಟೆಲಗ್ರಾಫ್ ಮೂಲಕವಾಗಿ ದಿನಾಲೂ ಸೂಚನೆಗಳು ಬರುತ್ತಲೇಇವೆ. ನೆರೆಯ ಋತುವಿನಲ್ಲಿ ಇನ್ನೂ ೯೦ ನಿಲುಮನೆಗಳಿಂದ ಸೂಚನೆದೊರೆಯುವ ವ್ಯವಸ್ಥೆಯುಂಟು. ಜಲಾಶಯದಎತ್ತರ ಎಷ್ಟೆಂದೂ, ಅಲ್ಲಿಂದ ಹೊರಗಟ್ಟುವ ನೀರಿನ ಪ್ರಮಾಣ ಎಷ್ಟೆಂದೂ ನಾಕ್ಸ್‌ವಿಲೆಯಲ್ಲಿರುವ ಕೇಂದ್ರ ಹವಾಮಾನದ ಕಾರ್ಯಾಲಯಕ್ಕೆ ಬೆಳಗ್ಗೆ ೬ ಗಂಟೆಯಿಂದ ಸೂಚನೆ ಬರತೊಡಗುವುದು. ಟೆಲಿಫೋನಿಗೂ, ಟೆಲಗ್ರಾಫಿಗೂ ಅತಿದೂರದಲ್ಲಿರುವ ಭಾಗಗಳಿಂದ ಮಳೆ ಮತ್ತು ನದಿಯ ಕುರಿತು

ಸೂಚನೆ ತರಿಸುವುದಕ್ಕೆ ರೇಡಿಯೋ ಮಾದರಿಯ ಒಟ್ಟು ೩೭ ವ್ಯವಸ್ಥೆ ಗಳಿವೆ. ನಿರ್ಜನವಾದ ಕಟ್ಟಡವಿಯ ಪ್ರದೇಶದಿಂದಲೂ ವಿಶ್ವಸನೀಯ ವಾದ ಅಂಕೆಸಂಖ್ಯೆಗಳು ನಾಕ್ಸ್‌ವಿಲೆಗೆ ತಪ್ಪದೆ ತಲಪುತ್ತವೆ. ಈ ಎಲ್ಲ ಅಂಕೆಸಂಖ್ಯೆಗಳ ಮೇಲಿಂದ ಎಷ್ಟು ನೀರು ಭೂಮಿಯ ಮೇಲಿಂದ ಹರಿಯುತ್ತದೆ? ಜಲಾಶಯುದ ಎತ್ತರವೆಷ್ಟಿರಬೇಕು? ವಿದ್ಯುತ್ ಉಂಟು ಮಾಡಲು ಅದೆಷ್ಟು ನೀರನ್ನು ಹೊರಗಟ್ಟಬೇಕು? ಎಂಬೀ ನಿರ್ಧಾರಗಳ್ನು ನಾಕ್ಸ್‌ವಿಲೆಯಲ್ಲಿ ಮಧ್ಯಾಹ್ನದ ಹೊತ್ತಿಗೆ ಮಾಡಿ, ಒಂದು ಪ್ರಕಟನೆ ಹೊರಡಿಸುತ್ತಾರೆ. ಈ ಪ್ರಕಟನೆ ಅತಿ ಮಹತ್ತ್ವದ್ದಾಗಿದೆ. ಏತಕ್ಕೆಂದರೆ, ನೆರೆನಿಯಂತ್ರಣ ಮಾಡಬೇಕಾದರೆ ಎಲ್ಲಿ, ಎಷ್ಟು, ನೀರು ಬಿದ್ದದೆ? ಎಷ್ಟು ನೀರು ಉಪನದಿಯಿಂದ ಟೆನಸಿಗೆ ಹರಿಯುತ್ತದೆ? ಎಂಬಿತ್ಯಾದಿ ವಿಷಯಗಳ ಗೊತ್ತುಗುರಿ ಸಕಾಲಕ್ಕೆ ದೊರೆಯಬೇಕು. ಏಕೆಂದರೆ ನೆರೆನಿಯಂತ್ರಣವು ಯಶಸ್ವಿಯಾಗಬೇಕಾದರೆ ಕಾಲದ ಮಿತಿಯುಂಟು. ಕಾಲತಪ್ಪಿ ಬಂದ ತಿಳಿವು ಯಾವ ಉಪಯೋಗಕ್ಕೂ ಬರಲಾರದು.

ನೆರೆಯ ನಿಯಂತ್ರಣಗಳನ್ನೊಳಗೊಂಡ ಭಿನ್ನೋದ್ದೇಶಕ ಯೋಜನೆಗಳಲ್ಲಿ ಈ ಮೂರು ತತ್ತ್ವಗಳನ್ನು ಕಾಣಬಹುದು: (೧) ಒಂದನೆಯ ಮತದ ಪ್ರಕಾರ ಜಲಾಶಯವು ಯಾವಾಗಲೂ ಬರಿದಾಗಿರಬೇಕು—ನೆರೆ ಬಂದಾಗ ನೀರು ತುಂಬಲು. (೨) ಜಲಾಶಯದ ಒಂದಂಶವನ್ನು ನೆರೆಯ ನಿಯಂತ್ರಣಕ್ಕೂ, ಅದೇ ಕಾಲಕ್ಕೆ ಇನ್ನೊಂದಂಶವನ್ನು ಭಿನ್ನೋದ್ದೇಶಗಳಿಗಾಗಿಯೂ ಕಾದಿರಿಸಬೇಕೆಂಬುದು ಎರಡನೆಯ ತತ್ವ. (೩) ಋತುಮಾನಕ್ಕೆ ತಕ್ಕಂತೆ ಜಲಾಶಯದ ಒಂದೇ ಅಂಶವನ್ನು ಒಮ್ಮೆ ನೆರೆನಿಯಂತ್ರಣಕ್ಕೂ, ಇನ್ನೊಮ್ಮೆ ಇತರೋದ್ದೇಶಗಳಿಗೂ ಉಪಯೋಗಿಸಬಹುದೆಂಬುದು ಮೂರನೆಯ ಕ್ರಮ. ಟೆನಸಿ ಯೋಜನೆಯಲ್ಲಿ ಈ ಮೂರು ತತ್ತ್ವಗಳಿಗೂ ಆಸ್ಪದವಿದೆ. ಒಂಭೊಂದೂ ಮಿತವ್ಯಯದ ದೃಷ್ಟಿಯಿಂದ ದೇಶ, ಕಾಲಮಾನಕ್ಕನುಸರಿಸಿ ಉಪಯೋಗಿಸಲ್ಪಟ್ಟಿದೆ. ಅತಿ ಕಡಮೆ ವೆಚ್ಚದಲ್ಲಿ ಭಿನ್ನೋದ್ದೇಶದ ನೆರೆ ನಿಯಂತ್ರಣ ನಡೆಯಬೇಕೆಂದು ಟೆನಸಿ ಶಿಲ್ಪಿಗಳು ಆಸ್ಥೆ ವಹಿಸಿದ್ದಾರೆ.

ಇಂಥ ಸುವ್ಯವಸ್ಥೆ ಪ್ರಪಂಚದ ಇತರ ನದೀಪಾತ್ರಗಳಲ್ಲಿಯೂ ಇರುತ್ತಿದ್ದರೆ "ಇಂದು ಯಾಂಗ್–ತ್ಸೀ ನದಿಯ ನೆರೆಯಲ್ಲಿ ಐದುಮಿಲಿಯ ಎಕರೆ ಪೈರಿನ ಹೊಲ ಮುಳುಗಿ ಹೋಯಿತು. ಸಾವಿರಗಟ್ಟಲೆ ಜನಹಾನಿ ಯಾಯಿತು. ಇಂದು ಗಂಗಾನದಿಯಲ್ಲಿ ನೆರೆ ಏರಿ ಐವತ್ತು ಸಾವಿರ ಮನೆಗಳೂ, ಒಂದು ಲಕ್ಷ ದನಕರುಗಳೂ ನಾಶವಾದುವು" ಎಂಬಿತ್ಯಾದಿ ಸುದ್ದಿಗಳಿಗೆ ಅವಕಾಶವಿರುತ್ತಿದ್ದಿಲ್ಲ. ಆದರೆ ಟಿನಸಿಯಂತೆ ಉತ್ತಮ ರೀತಿಯಲ್ಲಿ ನಿಯಂತ್ರಿಸಲ್ಪಡುವ ನದಿಗಳು ಪ್ರಪಂಚದಲ್ಲಿ ಬೇರಿಲ್ಲವೆಂದರೂ ಸಲ್ಲುವುದು. ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತೇ ಹೊರತು, ಅಂಕೆ ಇದ್ದರೆ, ಅದೇ ಕಪಿ ರಾವಣನ ರಾಜ್ಯಕ್ಕಾದರೂ ಹಣ್ಣು ಕಂಪಲು ಕೊಯ್ದು ಕೊಡುತ್ತಿದ್ದಿಲ್ಲವೆ?

---

# — ಮುಖ್ಯ ಟೇವೀಎ ಅಣೆಕಟ್ಟುಗಳ ವಿವರ —

## ಮುಖ್ಯ ನದಿಯ ಮೇಲಿನ ಯೋಜನೆಗಳು.

| ಯೋಜನೆ | ನದಿ. | ಪ್ರಾಂತ್ಯ | ಪರಮಾವಧಿ ಎತ್ತರ (ಅಡಿ) | ಉದ್ದ (ಅಡಿ) | ಒಟ್ಟು ಜನ ಸಂಗ್ರಹ (ಎಕರೆ-ಅಡಿ) | ಜಲಾಶಯದ ಉದ್ದ (ಮೈಲು) | ಜಲಾಶಯದ ವಿಸ್ತಾರ (ಎಕರೆ) | ಮೂಲನದಿಯ ತಳ (ಎಕರೆ) | ಜಲಾಶಯಗಳ ಕರೆ (ಮೈಲು) | ಅಂದಾಜು ವೆಚ್ಚ (ಡಾಲರು) |
|---|---|---|---|---|---|---|---|---|---|---|
| ಕೆಂಟುಕಿ | ಟೆನಸಿ | ಕೆಂಟುಕಿ | ೨೦೬ | ೮,೪೨೨ | ೬,೦೦೨,೬೦೦ | ೧೮೪-೩ | ೧೫೮,೩೦೦ | ೨೩,೮೦೦ | ೨,೩೮೦ | ೧೧೭,೭೦೦,೦೦೦ |
| ಪಿಕ್‌ವಿಕ್ ಲೆಂಡಿಂಗ್ | ಟೆನಸಿ | ಟೆನಸಿ | ೧೧೩ | ೭.೭೧೫ | ೧,೦೯೧,೪೦೦ | ೫೨.೭ | ೪೨,೮೦೦ | ೯,೬೦೦ | ೪೯೬ | ೩೯,೬೦೦,೦೦೦ |
| ವಿಲ್ಸನ್ | ಟೆನಸಿ | ಅಲಬಾಮಾ | ೧೩೭ | ೪,೮೬೨ | ೫೬೨,೫೦೦ | ೧೫-೫ | ೧೫,೮೦೦ | ೮,೮೦೦ | ೧೫೪ | ೪೧,೨೦೦,೦೦೦ |
| ವ್ಹೀಲರ್ | ಟೆನಸಿ | ಅಲಬಾಮಾ | ೭೨ | ೬,೩೪೨ | ೧,೧೫೦,೪೦೦ | ೭೪.೧ | ೬೭,೧೦೦ | ೧೭,೬೦೦ | ೧.೦೬೩ | ೪೨,೨೦೦,೦೦೦ |
| ಗಂಟರ್ಸ್‌ವಿಲೆ | ಟೆನಸಿ | ಅಲಬಾಮಾ | ೯೪ | ೩,೯೭೯ | ೧,೦೧೮,೭೦೦ | ೮೨.೧ | ೬೯,೧೦೦ | ೧೨,೩೦೦ | ೯೬೨ | ೩೫,೧೦೦,೦೦೦ |
| ಹೇಲ್ಸ್‌ಬಾರ್ | ಟೆನಸಿ | ಟೆನಸಿ | ೧೧೩ | ೨,೩೧೫ | ೧೫೪,೪೦೦ | ೩೯.೯ | ೬,೭೫೦ | ೩,೮೦೦ | ೧೬೨ | |
| ಚಿಕ್ಕಮೊಗ | ಟೆನಸಿ | ಟೆನಸಿ | ೧೨೯ | ೫,೮೦೦ | ೭೦೫,೩೦೦ | ೫೮.೯ | ೩೪,೫೦೦ | ೯,೫೦೦ | ೮೧೦ | ೩೮,೨೦೦,೦೦೦ |
| ವಾಟ್ಸ್‌ಬಾರ್ | ಟೆನಸಿ | ಟೆನಸಿ | ೧೧೨ | ೨,೯೬೦ | ೧,೧೩೨,೦೦೦ | ೭೨.೪ | ೩೮,೬೦೦ | ೧೦,೩೦೦ | ೭೮೩ | ೩೩,೩೦೦,೦೦೦ |
| ಫೋರ್ಟ್ ಲೊಡೋನ್ | ಟೆನಸಿ | ಟೆನಸಿ | ೧೨೨ | ೪,೧೯೦ | ೩೮೬,೫೦೦ | ೫೫.೦ | ೧೪,೫೦೦ | ೪,೫೦೦ | ೩೬೦ | ೪೧,೧೦೦,೦೦೦ |

## ಉಪನದಿಗಳಮೇಲಿನಯೋಜನೆಗಳು-

| ಯೋಜನೆ | ನದಿ. | ಪ್ರಾಂತ್ಯ | ಪರಮಾವಧಿ ಎತ್ತರ (ಅಡಿ) | ಉದ್ದ (ಅಡಿ) | ಒಟ್ಟು ಜನ ಸಂಗ್ರಹ (ಎಕರೆ-ಅಡಿ) | ಜಲಾಶಯದ ಉದ್ದ (ಮೈಲು) | ಜಲಾಶಯದ ವಿಸ್ತಾರ (ಎಕರೆ) | ಮೂಲನದಿಯ ತಳ (ಎಕರೆ) | ಜಲಾಶಯಗಳ ಕರೆ (ಮೈಲು) | ಅಂದಾಜು ವೆಚ್ಚ (ಡಾಲರು) |
|---|---|---|---|---|---|---|---|---|---|---|
| ನೋರಿಸ್ | ಕ್ಲಿಂಚ್ | ಟೆನಸಿ | ೨೬೫ | ೧,೮೬೦ | ೨,೫೬೭,೦೦೦ | ೭೨–೫೬ | ೩೪,೨೦೦ | ೩,೦೦೦ | ೮೦೦ | ೩೦,೫೦೦,೦೦೦ |
| ಹಿವಾಸಿ | ಹಿವಾಸಿ | ಉತ್ತರ ಕೆರೊಲಿನಾ | ೩೦೭ | ೧,೨೮೭ | ೪೩೮,೦೦೦ | ೨೨ | ೬,೨೪೦ | ೧,೦೦೦ | ೧೮೦ | ೧೮,೮೦೦,೦೦೦ |
| ಚೆರೋಕಿ | ಹೊಲ್‌ಸ್ಟನ್ | ಟೆನಸಿ | ೧೭೫ | ೬,೭೬೦ | ೧,೫೬೫,೪೦೦ | ೫೯ | ೩೦,೨೦೦ | ೨,೫೫೦ | ೪೬೩ | ೩೧,೮೦೦,೦೦೦ |

| | | | | | | | | | | |
|---|---|---|---|---|---|---|---|---|---|---|
| ಅಪಲೇಚಿಯಾ | ಹಿವಾಸಿ | ಉತ್ತರ ಕೆರೊಲಿನಾ | ೧೫೦ | ೧,೩೦೮ | ೫೮,೫೭೦ | ೯.೭ | ೧,೧೨೩ | ೩೮೬ | ೩೧ | ೨೨,೮೦೦.೦೦೦ |
| ಸೊತ್ರ್ಲಿ | ಸೊತ್ರ್ಲಿ | ಜಾರ್ಜಿಯಾ | ೧೮೪ | ೨,೩೦೦ | ೧೮೪,೪೦೦ | ೨೦ | ೧೭೦ | ೧೦೬ | ೪೨೯೦ | ೫,೫೦೦,೦೦೦ |
| ಒಕೊಯಿ ೩. | ಒಕೊಯಿ | ಟೆನಸಿ | ೧೧೦ | ೬೧೨ | ೧೪,೪೪೦ | ೭ | ೨೬೦ | ೨೪ | ೬೦೬ | ೮,೨೦೦,೦೦೦ |
| ಚಟುಂಗೆ | ಹಿವಾಸಿ | ಉ. ಕೆರೊಲಿನಾ | ೧೪೪ | ೨೮೫೦ | ೨೪೭,೮೦೦ | ೧೩ | ೧೦೭ | ೧೩೨ | ೭೧೫೦ | ೭,೨೦೦,೦೦೦ |
| ಫೊಂಟಾನ | ಲಿಟ್ಲ್ ಟೆನಸಿ | ಉ. ಕೆರೊಲಿನಾ | ೪೮೦ | ೨೩೬೫ | ೧,೪೪೪,೩೦೦ | ೨೬ | ೧,೬೫೦ | ೨೪೮ | ೧೦,೬೭೦ | ೭೨,೩೦೦,೦೦೦ |
| ವಟೋಗ | ವಟೋಗ | ಟೆನಸಿ | ೩೧೮ | ೯೦೦ | ೬೭೭,೦೦೦ | ೧೭ | ೩೪೦ | ೧೦೯ | ೭,೧೦೦ | ೨೮,೯೦೦,೦೦೦ |
| ದಕ್ಷಿಣ ಹೊಲ್ಸ್ಟನ್ | ದ. ಫೋರ್ಕ್ ಹೊಲ್ಸ್ಟನ್ | ಟೆನಸಿ | ೨೯೦ | ೧೫೫೦ | ೭೮೩,೦೦೦ | ೨೪.೩ | ೫೦೦ | ೧೮೭ | ೯,೧೦೦ | ೩೦,೬೫೦,೦೦೦ |
| ಡೂಗ್ಲಾಸ್ | ಫ್ರೆಂಚ್ ಬ್ರೋಡ್ | ಟೆನಸಿ | ೨೦೨ | ೧೭೦೫ | ೧,೫೧೪,೧೦೦ | ೪೩.೧ | ೩೧೭೦ | ೫೫೫ | ೩೦,೬೦೦ | ೪೧,೮೦೦,೦೦೦ |
| ಒಕೊಯಿ ೧ | ಒಕೊಯಿ | ಟೆನಸಿ | ೧೩೫ | ೮೪೦ | ೯೧,೩೦೦ | ೭.೫ | ೧೭೦ | ೧೮ | ೧,೯೦೦ | — |
| ಒಕೊಯಿ ೨ | ಒಕೊಯಿ | ಟೆನಸಿ | ೩೦ | ೪೫೦ | — | — | — | — | — | — |
| ಬ್ಲೂರಿಜ್ | ಟೊಕ್ಕೊಅ | ಜಾರ್ಜಿಯಾ | ೧೬೭ | ೧,೦೦೦ | ೧೯೭,೫೦೦ | ೧೦ | ೧೮೨ | ೬೦ | ೩೨೯೦ | — |
| ಗ್ರೇಟ್ ಫಾಲ್ಸ್ | ಕೇನಿಫೋರ್ಕ್ | ಟೆನಸಿ | ೯೨ | ೮೦೦ | ೫೪,೫೦೦ | ೨೨ | ೮೫೦ | ೧೨೦ | ೨೨೭೦ | — |
| | | | | ಒಟ್ಟು | ೨೨,೦೪೧,೧೧೦ | | ೧೧೪,೪೧೬ | ೧೦,೨೦೩ | ೫೯೬,೧೮೯ | |

## ಅಧ್ಯಾಯ ಮೂರು.

# ಜೀವನದ ಬೆಳಕು.

ಟೀವೀಏ ಕಟ್ಟಿದ ಅಣೆಕಟ್ಟುಗಳ ದೆಸೆಯಿಂದಾಗಿ ಹತ್ತು ವರ್ಷಗಳೊಳಗೆ ಟೆನಸಿ ಕಂದರವು ಸಂಯುಕ್ತ ರಾಜ್ಯದಲ್ಲಿ ಎರಡನೆಯ ಶಕ್ತ್ಯುತ್ಪಾದಕ ಪ್ರದೇಶವಾಗಿ ಪರಿಗಣಿಸಲ್ಪಡುತ್ತಿದೆ. ವಿದ್ಯುಚ್ಛಕ್ತಿ ಜನಜೀವನಕ್ಕೆ ಬೆಳಕಾಗಿರುವುದು ಮಾತ್ರವಲ್ಲದೆ, ಅದರ ಮುಂದಿನ ಭವಿತವ್ಯದರ್ಶನಕ್ಕೂ ತೋರುಬೆಳಕಾಗಿದೆ. ೧೯೪೪ರಲ್ಲಿ ಹನ್ನೆರಡು ಬಿಲಿಯ ಕಿಲೋವಾಟ್-ಗಂಟೆ ವಿದ್ಯುಚ್ಛಕ್ತಿಯನ್ನೂ, ಅದೇ ೧೯೪೭ರಲ್ಲಿ ಸುಮಾರು ಹದಿನೈದು ಬಿಲಿಯ ಕಿಲೋವಾಟ್-ಗಂಟೆ ವಿದ್ಯುತ್ತನ್ನೂ ಹೊರಡಿಸಿದ ಅಪಾರ ಶಕ್ತಿ ಸಂಚಯದಿಂದ ಕಂದರದಲ್ಲಿ ಎಂತೆಂತಹ ಬದಲಾವಣೆಯಾಗಿರಬೇಡ?

ಈ ಬಿಲಿಯಗಟ್ಟಲೆಯ ಅಂಕಗಣಿತದಿಂದ ಸಾಮಾನ್ಯ ಜನರಿಗೆ ಅಗಣಿತವಾದ ಲಾಭಉಂಟಾಗಿದೆ. ಒಂದು ಜನಕ್ಕೆ ಲಭಿಸುವ ವಿದ್ಯುತ್ಪ್ರಮಾಣವು ಆ ಜನದ ಸಮಗ್ರ ಉತ್ಪಾದನಾ ಸಾಮರ್ಥ್ಯವನ್ನೂ, ಔದ್ಯೋಗೀಕರಣಕ್ಕಾಗಿ ಅವರಲ್ಲಿರುವ ಪ್ರಚ್ಛನ್ನ ಶಕ್ತಿಯನ್ನೂ, ಒಟ್ಟಿನ ಮೇಲೆ ಅವರ ಜೀವನದ ಭವಿಷ್ಯವನ್ನೂ ನಿರ್ಣಯಿಸುವುದು. ಒಂದು ಕಿಲೋವಾಟ್-ಗಂಟೆ ವಿದ್ಯುತ್ತೆಂದರೆ ಆಧುನಿಕಕಾಲದ ಗುಲಾಮನೆನ್ನಬಹುದು. ಹನ್ನೆರಡು ಬಿಲಿಯ ಕಿಲೋವಾಟ್-ಗಂಟೆ ವಿದ್ಯುತ್ತನ್ನು ೧೨೦ ಬಿಲಿಯ ಮನುಷ್ಯ-ಗಂಟೆಯೆಂದು ಪರಿಗಣಿಸಿದರೆ, ಒಂದೇ ಒಂದು ಪ್ರದೇಶಕ್ಕೆ ಅನ್ವಯಿಸುವ ಈ ಶಕ್ತಿಯ ಉಪಯೋಗವೇನೆಂದು ಕೊಂಚವಾದರೂ ತಿಳಿದೀತು. ವಿದ್ಯುತ್ ಯುಗವೆಂದರೆ ಮಾನವಶಕ್ತಿಯ ಪ್ರವರ್ಧಮಾನದ ಯುಗವಲ್ಲವೆ?

ಸಂಯುಕ್ತ ರಾಜ್ಯದಲ್ಲಿ ಉಪಯೋಗಿಸಲಾಗುವ ವಿದ್ಯುತ್ತಿಗಿಂತ ಟೆನಸಿಕಂದರದಲ್ಲಿ ತಲಾ ಒಂದರ ಇಮ್ಮಡಿ ವಿದ್ಯುತ್ತು ಉಪಯೋಗಿಸಲ್ಪ

ಡುತ್ತಿದೆ. ಒಂದು ದಶಕದೊಳಗಾಗಿ ಕಂದರದ ವಿದ್ಯುತ್ ಅಳವಡಿಕೆ ಐದುಪಟ್ಟು ಬೆಳೆದಿದೆ—ತಲಾ ಒಂದರ ೪೮೦ ಕಿಲೋವಾಟ್‌ನಿಂದ ೨೪೮೦ ಕಿಲೋವಾಟ್ಟಗೆ. (ಸಂ. ರಾಜ್ಯದಲ್ಲಿ ತಲಾ ಒಂದರ ೧೫೩೦ ಕಿ. ವಾ. ಮಾತ್ರ)

ಹಿಂದುಳಿದ ದೇಶಗಳಲ್ಲಿ ಕೈಗಾರಿಕೆ, ಉದ್ಯಮ ಬೆಳೆಯಬೇಕಾದರೆ ವಿದ್ಯುತ್ತು ಅತಿ ಪ್ರಾಮುಖ್ಯವಾಗಿದೆ. ವಿದ್ಯುತ್ತಿನ ಉಪಯೋಗ ಎಷ್ಟು ಎಷ್ಟು ಅಧಿಕವಾಗುವುದೋ, ಅಷ್ಟಷ್ಟಕ್ಕೆ ದೇಶದ ಔದ್ಯೋಗಿಕ ಪ್ರಗತಿಯೂ ಮುಂದೆ ಸಾಗುವುದು.

ಕಳೆದ ಹದಿನೈದು ವರುಷಗಳಲ್ಲಿ ವಿದ್ಯುತ್ತಿನ ಪ್ರಗತಿ ಹೇಗೆ ಸಾಗಿದೆ ಎಂಬುದನ್ನು ತುಸು ವಿವರವಾಗಿ ಪರಿಶೀಲಿಸಿದರೆ ಟಿನಸಿ ಕಂದರದ ಸರ್ವತೋಮುಖವಾದ ಪ್ರಗತಿಗೆ ವಿದ್ಯುತ್ತು ಮೂಲಕಾರಣವೆಂದು ನಿರ್ವಿವಾದವಾಗಿ ಹೇಳಬಹುದಾಗುತ್ತದೆ. ೧೯೪೭ರಲ್ಲಿ ೧೯೩೩ಕ್ಕಿಂತ ಹತ್ತುಪಾಲು ಹೆಚ್ಚು ಪ್ರಮಾಣದ ವಿದ್ಯುತ್ ತಯಾರಿಕೆ ನಡೆಯಿತು. ಹಿಂದಿನ ಅಧ್ಯಾಯದಲ್ಲಿ ಹೇಳಿದ ನೆರೆ ನಿಯಂತ್ರಣವೇ ಮೊದಲಾದ ಇತರ ಪ್ರಾಮುಖ್ಯ ಕಾರ್ಯಗಳಿಗೆ ಯಾವ ಒಂದೂ ತಡೆಯನ್ನು ಮಾಡದೆಯೂ ಈ ಪ್ರಮಾಣದಲ್ಲಿ ವಿದ್ಯುತ್ತು ಬೆಳೆದುದು ಒಂದು ವಿಶೇಷವಾದ ಸಂಗತಿ. ಹೋದ ಯುದ್ಧದಲ್ಲಿ ಅಲ್ಯೂಮಿನಿಯಮ್, ರಂಜಕ ಮುಂತಾದ ವಸ್ತುಗಳ ತಯಾರಿಕೆಗೂ, ಪರಮಾಣು ಶಕ್ತಿಯ ವಿಕಾಸಕ್ಕೂ ಕಂದರದ ವಿದ್ಯುತ್ತನ್ನು ಪಯೋಗಿಸಲಾಗಿದೆ. ಶಾಂತಿಯ ಕಾಲದಲ್ಲಿ ಇದೇ ವಿದ್ಯುಚ್ಛಕ್ತಿಯನ್ನು ಸಾಮಾಜಿಕ ಲಾಭಕ್ಕಾಗಿ ಉಪಯೋಗಿಸಲಾಗುತ್ತಿದೆ ಎಂದು ಬೇರೆ ಹೇಳುವುದಗತ್ಯವಿಲ್ಲ.

೧೯೪೭ರಲ್ಲಿ ೧೩೯ ಮುನಿಸಿಪಲ್ ಮತ್ತು ಸಹಕಾರಿ ಸಂಘಗಳು ಮುಕ್ಕಾಲು ಮಿಲಿಯ ಗ್ರಾಹಕರಿಗೆ ವಿದ್ಯುಚ್ಛಕ್ತಿಯನ್ನೊದಗಿಸುವ ಕೆಲಸ ಹೊತ್ತಿದ್ದುವು. ಒಟ್ಟು ವರ್ಷದ ಉತ್ಪತ್ತಿ ಐವತ್ತೊಂದು ಮಿಲಿಯ ಡಾಲರು. ಈ ಹದಿನೈದು ವರ್ಷಗಳಲ್ಲಿ ಮನೆವಾರ್ತೆಗೆ ಉಪಯೋಗಿ

ಸುವ ವಿದ್ಯುತ್ತಿನ ಪ್ರಮಾಣ ತಲಾ ೨,೨೦೦ ಕಿಲೋವಾಟ್–ತಾಸು ಬೆಳೆದಿದ್ದು, ರಾಷ್ಟ್ರೀಯ ಉಪಯೋಗಕ್ಕಿಂತ ನೂರಕ್ಕೆ ಅರುವತ್ತರಷ್ಟು ಮೀರಿದೆ. ಮನೆವಾರ್ತೆಯ ಗ್ರಾಹಕರ ಸಂಖ್ಯೆ ಮೂರುಪಾಲು ಬೆಳೆದುದರಿಂದ ವಿದ್ಯುತ್ತಿನ ಉಪಯೋಗ ೧೯೩೩ರಲ್ಲಿದ್ದುದಕ್ಕಿಂತ ಹತ್ತರಷ್ಟು ಹೆಚ್ಚಾಗಿದೆ.

೧೯೩೩ರಲ್ಲಿ ಹಳ್ಳಿಗಳಿಗೆ ವಿದ್ಯುತ್ತಿನ ಪೂರೈಕೆ ಬಹಳ ಕಡಮೆಯಾಗಿದ್ದುದು, ಈಗ ಸುಮಾರು ಕಾಲು ಮಿಲಿಯ ಹಳ್ಳಿಯ ಗ್ರಾಹಕರಷ್ಟು ಗಾತ್ರಕ್ಕೆ ಬೆಳೆದಿದೆ. ಸುಮಾರು ೧೫೦,೦೦೦ ಹೊಲಗಳಿಗೆ ವಿದ್ಯುತ್ತು ಬಂದಿದೆ. ೧೯೩೩ರಲ್ಲಿ ೨೮ ಹೊಲಗಳಲ್ಲೊಂದಕ್ಕೆ ವಿದ್ಯುತ್ತಿನ ಪೂರೈಕೆ ಇದ್ದರೆ, ಈಗ ಮೂರು ಹೊಲಗಳಿಗೊಂದರಷ್ಟು ಅಧಿಕವಾಗಿದೆ. ನಗರವಾಸಿಗಳಿಗೆ ಮಾತ್ರವೇ ಲಭ್ಯವಾಗುತ್ತಿದ್ದ ಸೌಕರ್ಯಗಳು ಹಳ್ಳಿಯವರಿಗೂ ಈಗ ಅನುಭವವೇದ್ಯವಾಗುತ್ತಿವೆ. ವಿದ್ಯುದ್ದೀಪ, ರೇಡಿಯೋ, ಬಟ್ಟೆ ತೊಳೆವ ಯಂತ್ರ, ವಿದ್ಯುತ್‌ಒಲೆ, ರಿಫ್ರಿಜರೇಟರು, ನಲ್ಲಿಯ ನೀರು, ಹಳ್ಳಿಗಳಲ್ಲಿಯೂ ಕೂಡ ಕಾಣಸಿಗುತ್ತವೆ. ಹುಲ್ಲೊಣಗಿಸುವುದು, ಬಟಾಟೆ ಸುಡುವುದು, ಮುಂತಾದ ಹೊಲಗೆಲಸಗಳಿಗಂತೂ ವಿದ್ಯುತ್ತಿನ ಉಪಯೋಗ ಇದ್ದೇ ಇದೆಯಲ್ಲವೆ?

ಇದೇ ರೀತಿಯಾಗಿ ವಾಣಿಜ್ಯ ಮತ್ತು ಔದ್ಯೋಗಿಕ ವಿಕಾಸದಲ್ಲಿಯೂ ವಿದ್ಯುತ್ತು ಭಾಗವಹಿಸಿದೆ. ಆಹಾರವನ್ನು ದೀರ್ಘಕಾಲ ಉಳಿಸುವ ಶೈತ್ಯಯಂತ್ರದ ಉದ್ಯೋಗ ಒಂದು ಬೃಹತ್ ಪ್ರಮಾಣದಲ್ಲಿ ಈ ಹದಿನೈದು ವರ್ಷಗಳಲ್ಲಿ ಮುನ್ನಡೆದಿದೆ. ಆಹಾರವನ್ನು ಬಿಟ್ಟರೆ ಉಳಿದ ಪ್ರಾದೇಶಿಕ ಸಾಧನಸಂಪತ್ತನ್ನುಪಯೋಗಿಸಿಕೊಂಡು ಬೆಳೆಯುವ ಮರ, ರಸಾಯನ ಮುಂತಾದ ಉದ್ಯೋಗಗಳಲ್ಲಿಯೂ ವಿದ್ಯುತ್ತಿನ ಉಪಕಾರ ಅಷ್ಟಿಷ್ಟಲ್ಲ.

೧೯೪೭ರಲ್ಲಿ ಟೀವೀಏ ಮಾರಿದ ವಿದ್ಯುತ್ತಿನ ಲೆಕ್ಕವನ್ನು ಈ ಕೆಳಗಿನ ಯಾದಿಯಲ್ಲಿ ನಮೂದಿಸಿದೆ:

| | ಮಾರಿದ ಕಿಲೋವಾಟ್-ಗಂಟೆ. | ಉತ್ಪತ್ತಿ. |
|---|---|---|
| ಮುನಿಸಿಪಾಲಿಟಿಗಳಿಗೂ. ಸಹಕಾರಿ ಸಂಘಗಳಿಗೂ ... | ೪,೫೮೩,೨೨೧,೫೧೩ | ೧೯,೬೩೫,೪೫೭ |
| ಉದ್ದಿಮೆಗಳಿಗೂ, ಫೆಡರಲ್ ಏಜನ್ಸಿಗಳಿಗೂ ... | ೫,೪೨೧,೮೭೩,೫೦೩ | ೧೭,೧೯೩,೦೬೦ |
| ವಿದ್ಯುತ್ತಿನ ಸಾರ್ವಜನಿಕ ಸಂಸ್ಥೆಗಳಿಗೆ | ೧,೦೪೨,೪೦೭,೫೧೬ | ೫,೧೭೩,೯೭೨ |
| ಡಿಪಾರ್ಟ್‌ಮೆಂಟುಗಳ ಒಳಗಿನ ಮಾರುವೆ ... | ೫೩೨,೨೩೩,೮೬೮ | ೧,೬೭೫,೭೩೩ |
| ಚಿಲ್ಲರೆ ಮಾರುವೆ–ಕಾಪರ್ ಹಿಲ್ ಪ್ರದೇಶದಲ್ಲಿ ... | ೭,೬೪೯,೬೩೪ | ೧೩೨,೩೫೦ |
| **ಒಟ್ಟು ಮಾರುವೆ** | ೧೧,೫೮೭,೩೮೬,೦೪೪ | ೪೩,೮೧೦,೫೭೨ |

ಪೂರೈಕೆಯ ಕೆಲಸದಲ್ಲಿ ಒಕ್ಕಲಿಗರದೂ ಒಂದು ಸ್ವಂತ ಭಾಗವಿರುವುದರಿಂದ ಕೆಲಸವು ಅತ್ಯಂತ ಆಸ್ಥೆಯಿಂದ ಜರಗುತ್ತದೆ. ೧೯೩೪ರಲ್ಲಿ ಒಂದು ಅಂಗಡಿಯ ಹಿಂದುಗಡೆ ಸೇರಿದ ಮೊದಲಿನ ಸಹಕಾರಿ ವಿದ್ಯುತ್ ಪೂರೈಕೆಯ ಸಂಘದ ಮಾದರಿಯಲ್ಲಿ ಈಗ ಒಟ್ಟು ೫೦೦ಕ್ಕೂ ಮಿಗಿಲಾದ ಸಂಸ್ಥೆಗಳು ಕೆಲಸಮಾಡುತ್ತಿವೆ. ಪ್ರತಿಯೊಂದು ಸಹಕಾರಿ ಸಂಘದ ವಾರ್ಷಿಕಸಭೆ ಜರಗುವಾಗ ರೈತರ ಕಾರ್ಯಕಲಾಪಗಳನ್ನು ಅರಿಯಬಹುದು. ಇಡಿ ಹಗಲೆಲ್ಲ ಅಧಿಕಾರಿಗಳೂ, ಟ್ರಸ್ಟಿಗಳೂ ಕೊಟ್ಟ ವರದಿಯ ಮೇಲೆ ಸಕುಟುಂಬ ಸಪರಿವಾರ ಬಂದಿರತಕ್ಕ ರೈತರು ಸಹಕಾರಿ ಸಂಘದ ಹಣಕಾಸಿನ ಲೆಕ್ಕಪತ್ರದ ವಿಷಯ ಕೂಲಂಕಷವಾಗಿ ಚರ್ಚಿಸುವುದನ್ನೂ, ಜತೆಗೆ ವಿದ್ಯುತ್ತಿನ ಹೊಸ ಹೊಸ ಉಪಯೋಗಗಳ ಪ್ರದರ್ಶನವನ್ನು ನೋಡುತ್ತಿರುವುದನ್ನೂ, ವಿಚಾರಿಸಿ ನೋಡಿದರೆ ಈ ವಾರ್ಷಿಕ ಸಭೆಗಳು ಬರಿಯ ವ್ಯಾವಹಾರಿಕ ಸಮ್ಮೇಳನ ಮಾತ್ರವಲ್ಲದೆ ಸಾಮಾನ್ಯ ಜನತೆಯ ಒಳದನಿಯ ಒಂದು ಕರೆಗೂ, ಕೋರಿಕೆಗೂ, ಪಡಿದನಿಗುಡುವುದನ್ನು ಕಾಣಬಹುದು. ಹತ್ತಿರದ ನಗರವಾಸಿಗಳು ಎಂದಿನಿಂದಲೋ ಅನುಭವಿಸಿಕೊಂಡು ಬರುತ್ತಿದ್ದ ವಿದ್ಯುತ್ ಸೌಕ

ರ್ಯವು ತಮಗೂ ಲಭಿಸಿ, ಅದರ ಪೂರೈಕೆಯ ವಿಷಯದಲ್ಲಿ ತಮ್ಮ ಮಾತೂ ನಡೆಯುವುದೆನ್ನುವ ಆತ್ಮವಿಶ್ವಾಸವು ಈ ಸಮ್ಮೇಳನಗಳಲ್ಲಿ ಒಡೆದು ತೋರುವುದು. ಇಂಥ ಸಂಘಗಳಲ್ಲಿ $1\frac{1}{4}$ ಮಿಲಿಯ ಬಂಡವಲು ಮತ್ತು ೬೭೦೦ ಸದಸ್ಯರುಗಳುಳ್ಳ ದೊಡ್ಡ ಸಂಘಗಳೂ, ಕೆಲವೇ ಸಹಸ್ರ ಬಂಡವಲಿನ ಕಿರುಕೂಟಗಳೂ ಇವೆ.

ಇಷ್ಟು ಹಿರಿಯ ಪ್ರಮಾಣದಲ್ಲಿ ವಿದ್ಯುತ್ತನ್ನು ಪಯೋಗಿಸುವ ಪ್ರದೇಶಗಳು ಪ್ರಪಂಚದಲ್ಲೇ ಅತಿ ವಿರಳ. ಇಷ್ಟು ಅತಿಶಯವಾಗಿ ವಿದ್ಯುತ್ತಿನ ಉಪಯೋಗ ನಡೆಯುವುದರ ಒಳಗುಟ್ಟೇನಿರಬಹುದು? ಟೆನಸಿ ಕಂದರಕ್ಕೂ ಹೆಚ್ಚಿನ ಆದಾಯವಿರಬಹುದಾದ ಪ್ರದೇಶಗಳಲ್ಲಿಯೂ ಇಲ್ಲಿರುವಷ್ಟು, ವಿದ್ಯುತ್ತಿನ ಉಪಯೋಗವೇಕಿಲ್ಲ? ಎಂದರೆ ಇಲ್ಲಿಯೂ ಹೇರಳ ಉತ್ಪಾದನೆಯ ಮೂಲತತ್ತ್ವವನ್ನೇ ಅನುಸರಿಸುವುದು ಕಂಡುಬರುತ್ತದೆ. "ಕಡಮೆದರ, ಹೆಚ್ಚು ಉಪಯೋಗ", ಈ ಸಿದ್ಧಾಂತ ಹೆನ್ರಿ ಫೋರ್ಡನಿಗೆ ಮಿಲಿಯಗಟ್ಟಲೆ ಲಾಭದೊರಕಿಸುವುದಾದರೆ, ಟೆನಸಿ ಕಂದರಕ್ಕೂ ಅದೇ ಸಿದ್ಧಾಂತ ಏತಕ್ಕನ್ವಯಿಸಬಾರದು? ಜನ ವಿದ್ಯುತ್ತನ್ನು ಉದಾರವಾಗಿ, ಪುಷ್ಕಳವಾಗಿ ಉಪಯೋಗಿಸಬೇಕಾದಲ್ಲಿ ಚಿಲ್ಲರೆದರಕ್ಕೆ ಸರಿಯಾಗಿ ಕತ್ತರಿ ಪ್ರಯೋಗ ಮಾಡಿದರೇನೆ ಸಾಧ್ಯ. ಹಾಗೆ ಮಾಡಿದುದರ ಫಲವಾಗಿಯೇ ಟೀವೀಏ ಪ್ರದೇಶದಲ್ಲಿ ಕನಸಿನಲ್ಲೂ ಎಣಿಸದಷ್ಟು ಪ್ರಮಾಣದಲ್ಲಿ ವಿದ್ಯುತ್ತಿನ ಉಪಯೋಗ ಬೆಳೆದಿರುವುದು. ದೂರದೂರದ ಕಗ್ಗಾಡಿನ ಹಳ್ಳಿಗಸಿಗೂ ರೇಡಿಯೋ ಸಂಗೀತದ ರಸಾಸ್ವಾದನೆಯ ಸಂದರ್ಭ ಒದಗಿದುದು. ಹಿಂದೆ ಕೊಳೆತುಹೋಗುತ್ತಿದ್ದ ಮಾಂಸವಿಶೇಷಗಳು ಈಗ ಲಾಭದಾಯಕವಾದ ರೀತಿಯಲ್ಲಿ ಹಳ್ಳಿಯನ್ನು ಬಿಟ್ಟು ರಿಫ್ರಿಜರೇಟರಿನಲ್ಲಿ ಯಾತ್ರೆ ಮಾಡುತ್ತಿರುವುದು.

ಟೀವೀಏ ಕಂಪೆನಿಗಳು ದರಇಳಿಸಿದ್ದನ್ನು ನೋಡಿ ಇತರ ಖಾಸಗೀ ಕಂಪೆನಿಗಳು ಕೆಲವು ತಾವೂ ದರ ಇಳಿಸಿ ಪರೀಕ್ಷಿಸಿದುವು. ಉದಾ: ಜಾರ್ಜಿಯಾ ಪವರ್ ಕಂಪೆನಿಯು ದರ ಇಳಿಸಿದೊಡನೆ ಇಡಿ ಸಂಯುಕ್ತ ರಾಜ್ಯದಲ್ಲೇ ರಿಫ್ರಿಜರೇಟರ್ ಮಾರುವೆಯಲ್ಲಿ ಮೊದಲನೆಯದೂ, ವಿದ್ಯುತ್ ಪಾಹಕಗಳ ಮಾರುವೆಯಲ್ಲಿ ಎರಡನೆಯದೂ, ಆಗಿ ಪರಿಣಮಿ

ಸಿತು. ಟೆನಸಿ ವಿದ್ಯುತ್ ಕಂಪೆನಿ ಎಂಬ ಇನ್ನೊಂದು ಖಾಸಗಿ ಸಂಸ್ಥೆ ದರ ಇಳಿತಾಯದ ಪ್ರಥಮ ವರ್ಷದಲ್ಲಿಯೇ ವಿದ್ಯುತ್ ವಾಹಕಗಳನ್ನು ಮಾರುವುದರಲ್ಲಿ ಮೊದಲಸ್ಥಾನವನ್ನೂ, ರಿಫ್ರಿಜರೇಟರ್ ಮಾರಾಟದಲ್ಲಿ ಎರಡನೆಯ ಸ್ಥಾನವನ್ನೂ, ಗಳಿಸಿಕೊಂಡಿತು. ಬಹಳ ಹೆಚ್ಚು ಆದಾಯವಿರುವ ನ್ಯೂಯೋರ್ಕ್, ಇಲ್ಲಿನೊಯ್ಸ ಪ್ರಾಂತ್ಯಗಳ ಕಂಪೆನಿಗಳಿಗಿಂತಲೂ ಹೆಚ್ಚಾದ ಮನೆವಾರ್ತೆಯ ವಿದ್ಯುತ್ ಉಪಕರಣಗಳ ಮಾರಾಟದ ಶ್ರೇಯಸ್ಸು ಬರಿಯ ಒಂದು ಮನೆವಾರ್ತೆಯ ಗ್ರಾಹಕರಿರುವ ಈ ಕಂಪೆನಿಗೆ ಲಭಿಸಿದ್ದರ ಗುಟ್ಟು ಮೊದಲೆಂದಂತೆ ಅದೇ "ಕಡಮೆದರ, ಹೆಚ್ಚು ಉಪಯೋಗ"ದ ಮಂತ್ರ.

ಟೇವೀಏ ರಚಿತವಾದ ಏಳೇ ಏಳು ವರ್ಷಗಳಲ್ಲಿ ವಿದ್ಯುತ್ತಿನ ದರ ನೂರಕ್ಕೆ ೨೩ರಷ್ಟು ಇಳಿಯಿತು. ೪೨ರ ಸುಮಾರಕ್ಕೆ ೩೩ರಷ್ಟು ಇಳಿಯಿತು. ಇಳಿದಂತೆ ಹೆಚ್ಚು ಹೆಚ್ಚು ಜನ, ಹೆಚ್ಚು ಹೆಚ್ಚು ಹೊಲಗಳು ವಿದ್ಯುತ್ತಿನ ಲಾಭಪಡೆಯಲು ಶಕ್ಯವಾಗಿದೆ. ಬೇಡಿಕೆಗಳು ಅಧಿಕವಾದಂತೆ ದರಇಳಿಸುವ ಕಾರ್ಯ ಇನ್ನಷ್ಟು ಸುಗಮವಾಗಿ ಇನ್ನು ಕೆಲವೇ ಕಾಲದಲ್ಲಿ ಟೆನಸಿ ಕಂದರದಲ್ಲಿ ಪ್ರಪಂಚದಲ್ಲಿಯೇ ಅತಿ ಅಗ್ಗದ ವಿದ್ಯುತ್ ಪೂರೈಕೆ ಜರಗುವುದರಲ್ಲಿ ಸಂದೇಹವಿಲ್ಲ. ಜತೆಗೆ ವಿದ್ಯುತ್ ಪೂರೈಕೆಗೆ ಹಾಕಿದ ಬಂಡವಲಿಗೆ ಅತಿಶಯವಾದ ಫಲ ದೊರೆಯುವುದರಿಂದ ಕಂಪೆನಿಗಳಿಗೂ ಬೇಕಷ್ಟು ಉತ್ತೇಜನ ದೊರೆಯಲು ಸಾಧ್ಯವುಂಟೆಂಬುದನ್ನು ಈ ಕೆಳಗಿನ ಯಾದಿಯಿಂದ ತಿಳಿಯಬಹುದು:

| | ಕೆಲಸದಲ್ಲಿರುವ ನಿವ್ವಳ ಸಾಧನ ಸಾಮಗ್ರಿ | ಸಂಚಿತ ಉತ್ಪತ್ತಿ | |
|---|---|---|---|
| | | ಮೊಬಲಗು | ನಿವ್ವಳ ಸಾಧನ ಸಾಮಗ್ರಿಯ, % |
| | ಮಿಲಿಯ ಡಾಲರು | ಮಿಲಿಯ ಡಾಲರು | |
| 1940 — — | ೧೭೯ | ೬ | ೩·೩ |
| 1941 — — | ೧೮೭ | ೧೩ | ೭·೦ |
| 1942 — — | ೨೬೪ | ೧೭ | ೬·೪ |
| 1943 — — | ೩೧೯ | ೨೯ | ೯·೧ |
| 1944 — — | ೩೫೯ | ೪೧ | ೧೧.೪ |
| 1945 — — | ೩೯೧ | ೫೯ | ೧೫·೧ |
| 1946 — — | ೩೯೬ | ೭೬ | ೧೯.೨ |
| 1947 — — | ೩೯೭ | ೯೮ | ೨೪·೭ |

## ಅಧ್ಯಾಯ ನಾಲ್ಕು.

# ಮಣ್ಣಿನ ನ್ಯಾಯ.

ಮಾನವ ಜನಾಂಗ ಮರಳಿಮಣ್ಣಿನ ಮರೆಹೋಗದೆ ಇದ್ದರೆ ನಾಗರಿಕತೆಯು ಭವಿಷ್ಯ ಬಲು ಕುರುಡಾಗಿದೆಯೆಂದು ಧಾರಾಳವಾಗಿ ನಂಬಬಹುದು. ಮಣ್ಣಿನಿಂದಲೇ ಜೀವ, ಮಣ್ಣಿನ ಸಾರವೇ ತನ್ನ ಜೀವನಸಾರ, ಎಂದು ಜನಾಂಗವು ಎಲ್ಲಿಯ ವರೆಗೆ ನಂಬುವುದೋ ಅಲ್ಲಿಯ ವರೆಗೆ ಅದರ ಬದುಕು. ಈ ತತ್ತ್ವವನ್ನು ಮರೆತ ಮರುದಿನದಿಂದ ಅದು ಪತನದ ದಾರಿಹಿಡಿದಿದೆ ಎನ್ನಬಹುದು. ಮಣ್ಣಿಂದ ದೂರವಾದ ಅನೇಕ ನಾಗರಿಕತೆಗಳು ಅಳಿದುಹೋದ ನಿದರ್ಶನಗಳು ಹಲವು ನಮ್ಮ ಕಣ್ಣಮುಂದಿರುವಾಗ 'ಮರಳಿಮಣ್ಣಿಗೆ' ಎಂಬ ಕೂಗು ಬರಡುಮಂತ್ರವಲ್ಲ. ಮಣ್ಣಿನ ಮಹಾತ್ಮ್ಯದ ಅರಿವಿನ ಆಳ ಮಾನವ ಜನಾಂಗದ ಬದುಕಿನ ದೂರವನ್ನೂ ನಿರ್ದೇಶಿಸುವುದು.

ಜೀವನಾಧಾರವಾದ ಮಣ್ಣಿನ ಮೇಲೆ ಬೆಳೆದ ಉತ್ಪತ್ತಿ ಮಾನವನಿಗೆ ಆಹಾರ; ಅದೇ ಅವನ ವ್ಯವಹಾರ ಕೂಡ. ಹೀಗೆ ಮಾನವನ ಆಹಾರ, ವಿಹಾರ, ವ್ಯಾಪಾರ, ವ್ಯವಹಾರಗಳು ಬೆಳೆಯಬೇಕಾದರೆ ಮಣ್ಣಿನಸಾರ ಉಳಿಯಬೇಕು. ಎಷ್ಟೋ ವರ್ಷಗಳಿಂದ ಪೈರುಕೊಡುತ್ತಿದ್ದ ಮಣ್ಣಿಂದು ಬಂಜರು ಭೂಮಿಯಾಗಿ ಬದಲಾದುದನ್ನೂ, ಬಹ್ವಂಶ ನೆಲ ನಿಧಾನವಾಗಿಯಾದರೂ ಖಂಡಿತವಾಗಿ ಬರಡಾಗುವ ಲಕ್ಷಣ ಸೂಚಿಸುವುದನ್ನೂ ತಿಳಿದಾಗ ಮಾನವ್ಯದ ಹಿತೈಷಿಗೆ ಎದೆನಡುಗುತ್ತದೆ. ಆದರೆ ಟೀವೀಏಯಂಥ ಉತ್ತಮ ಯತ್ನವನ್ನು ಪರಿಶೀಲಿಸಿದರೆ ಕಂಗೆಡುವ ಅವಶ್ಯವಿಲ್ಲವೆಂಬುದೂ ಒಡನೆ ಸ್ಫುರಿಸುತ್ತದೆ. ಮಣ್ಣಿನ ಸಾರವನ್ನು, ಟೀವೀಏ ತಂತ್ರಜ್ಞರೂ ರೈತರೂ ಕೂಡಿ ಹೇಗೆ ಉಳಿಸಿಕೊಂಡಿದ್ದಾರೆ ಮತ್ತು ಬೆಳೆಸಿಕೊಂಡಿದ್ದಾರೆ ಎಂಬುದನ್ನೂ, ಆ ಸಾರವೃದ್ಧಿಯಿಂದ ಅವರ ಜೀವನದ ಭವಿಷ್ಯ ಹೇಗೆ ಉಜ್ಜ್ವಲವಾಗಿದೆ ಎಂಬುದನ್ನೂ ಇಲ್ಲಿ ನಿರೂಪಿಸಬೇಕಾಗಿದೆ.

ಇಪ್ಪತ್ತನೆಯ ಶತಮಾನದ ಆದಿಯಲ್ಲಿಯೇ ಅಮೇರಿಕದ ಜನ ತಿಳಿದುಕೊಂಡ ಮುಖ್ಯ ವಿಷಯಗಳೆರಡು: (೧) ಮಣ್ಣಿನ ಸಾರಪಾಲನೆ.

ಎಲ್ಲರೂ ಸಾರಪಾಲನೆಗೆ ಕೈಕೊಟ್ಟಿದ್ದಾರೆಂದೇನೂ ಅರ್ಥವಲ್ಲವಾದರೂ, ಸಾರಪಾಲನೆಯನ್ನು ಮಾಡದೆ ಹೋದಲ್ಲಿ ಎಂಥ ಮಹಾಹಾನಿ ಸಂಭವಿಸೀತೆಂಬುದರ ಅರಿವಾದರೂ ಉದಿಸಿರುವುದು. (೨) 'ಸಮೃದ್ಧಿಯನ್ನು ತರಬಲ್ಲ ಅರ್ಥವ್ಯವಸ್ಥೆ'—ಈ ವಿಚಾರವಾಗಿ ಬಾಯಿಮಾತು ಬಹಳ ನಡೆದರೂ ಕಾರ್ಯ ಇನ್ನೂ ಅಲ್ಪವಾಗಿಯೇ ಇದೆ. ಆದರೆ ಈ ಬಗೆಯ ಸಮೃದ್ಧಿಯೇ ಉದ್ದೇಶವಾಗಿರುವ ಅರ್ಥವ್ಯವಸ್ಥೆಯನ್ನು ಚರಿತಾರ್ಥಗೊಳಿಸಲು ನಾವು ಯತ್ನಿಸಿದ್ದೇ ಆದರೆ ಪ್ರಾಕೃತಿಕ ಸಂಪತ್ತನ್ನು ಎಷ್ಟು ತೀವ್ರವಾಗಿ ಮುಂದುವೆಚ್ಚ ಮಾಡಿದರೂ ಕೂಡ, ನಾಗಾಲೋಟದ ವೈಜ್ಞಾನಿಕ ಪ್ರಗತಿಯ ದೆಸೆಯಿಂದಾಗಿ ದೇಶದಲ್ಲಿ ಸಮೃದ್ಧಿ ಉಂಟಾಗಿಯೇ ತೀರಬೇಕು. (೩) ಮೇಲಿನ ಎರಡು ವಿಚಾರಗಳ ಸಮನ್ವಯವೇ ಮೂರನೆಯ ಮುಖ್ಯ ವಿಚಾರ. ನಮಗೆ ತಿಳಿದ ಮಟ್ಟಿಗೆ,—ತಿಳಿದುದರ ಮೇಲಿಂದ—ಕಾರ್ಯಪ್ರವೃತ್ತರಾಗುವುದೇ ಆ ವಿಚಾರದ ಮಹತ್ತ್ವ. ಈ ಕ್ಷಣವೇ ಪ್ರಕೃತಿಯನ್ನು ಪಳಗಿಸಿ ನಮ್ಮ ತೊತ್ತಾಗಿರಿಸಿಕೊಳ್ಳುವ ವಿಚಾರವನ್ನು ನಾವು ನಮ್ಮ ಮನಸ್ಸಿನಿಂದ ಹೊಡೆದೋಡಿಸಬೇಕು. ಪ್ರಾಕೃತಿಕ ಸಂಪತ್ತಿನ ಮೇಲೆ ಸೂರೆನಡೆಸಿದ ಪ್ರತಿಯೊಂದು ನಾಗರಿಕತೆಯೂ ಅಳಿದು ಹೋಗಿರುವುದರ ಜ್ಞಾನ ನಮಗಿದ್ದ ಮೇಲೆ, ಆ ಜ್ಞಾನದಿಂದ ಚೇತರಿಸಿಕೊಂಡು, ಪ್ರಕೃತಿಯ ಶಕ್ತಿಯೊಡನೆ ರಚನಾತ್ಮಕವಾದ ಒಡಂಬಡಿಕೆಯನ್ನು ಮಾಡಿಕೊಂಡು, ಬಾಳುವುದು ಲೇಸಲ್ಲವೆ?

ಹೀಗೆ ಮಾಡಿದರೆ ನಮ್ಮ ರಾಜಕೀಯ ಸಾಮಾಜಿಕ ಸ್ವಾತಂತ್ರ್ಯಗಳುಳಿದಾವು; ಇಲ್ಲವೋ, ಅಳಿದಾವು! ಈ ಮುಂದೆಣಿಕೆಗೆ ಕೆಲವರು ದೂರದೃಷ್ಟಿ ಎನ್ನಲಿ, ಇತರರು ಯೋಜನಾಪದ್ಧತಿ ಎನ್ನಲಿ. ಮುಖ್ಯವಿಷಯ ಒಂದೇ—ಇದೊಂದು ಹೊಸವಿಚಾರವಲ್ಲ. ಯೋಜನೆಯ ಮೊತ್ತಮೊದಲಿನ ಕಾರ್ಯಕರ್ತ್ರಿ ಪ್ರಕೃತಿಯೇ; ಇಲ್ಲಿ ನಡೆಯುವುದು ಆಕೆ ಹೇಳಿದ ಮಾತು ಮಾತ್ರವೇ. ಪ್ರಕೃತಿಯ ಯೋಜನೆಯಲ್ಲಿ ಜಗದಗಲ ಹಾಸುಹೊಕ್ಕಾಗಿ ಬಳೆದುಕೊಂಡಿರುವ ಸಾಮರಸ್ಯವು ಮಾನವ ನಿರ್ಮಿತವಾದ ಯೋಜನೆಯಲ್ಲಿಯೂ ಮೂಡಿಬರದೆ ಹೋದಲ್ಲಿ ಪ್ರಕೃತಿ ಆದಿಮಾತೆಯಾಗುತ್ತಾಳೆ;

ಮಾಂಕಾಳಿಯಾಗಿ ಜಗತ್ತನ್ನು ಸುಡಬಲ್ಲ ಮಹಾಶಕ್ತಿಯಾಗಿ ಅವತರಿಸುತ್ತಾಳೆ.

ಪ್ರಕೃತಿಯ ಒಡನಾಟದಲ್ಲಿ ಮನುಷ್ಯ ಎಷ್ಟೆಂದರೂ ಕಿರಿಯ ಪಾಲುಗಾರ. ತನ್ನ ಸ್ಥಾನಮಾನವನ್ನೂ ಗೊತ್ತುಗುರಿಯನ್ನೂ, ಇತಿಮಿತಿಯನ್ನೂ ಅರಿತುಕೊಂಡೇ ಆತ ಸಹಕರಿಸಬೇಕು.

ಔದ್ಯೋಗಿಕ ಯುಗದ ಬೆನ್ನ ಹಿಂದೆಯೇ ಪ್ರಾಶಸ್ತ್ಯಕ್ಕೆ ಬಂದ ಹಣಕಾಸಿನ ಮಾಯಾಮರೀಚಿಕೆಗೆ ಮಾರುಹೋಗಿ ಮಾನವ ಜನಾಂಗ ತನ್ನ ಹೆಡಮಲೆಯನ್ನು ಮೃತ್ಯುವಿನ ಬಲಿಗೈಗಿತ್ತಿದೆ. ಅದರಿಂದ ತಪ್ಪಿಸಿಕೊಳ್ಳಬೇಕಾದರೆ ಹಣಕಾಸಿನ ಬಿನ್ನಣದ ಮೋಹವನ್ನು ಬದಿಗೊತ್ತಿ ಮನುಷ್ಯ ದ್ರಷ್ಟಾರನಾಗಬೇಕು. ದಿಗಂತದಕಡೆ ಕಣ್ಣುಚಾಚುವ ಆಹೊತ್ತು ಹಣಕಾಸಿನ ಚಿಕ್ಕದೊಡ್ಡ ಗುಡ್ಡಬೆಟ್ಟಗಳ ರಮ್ಯತೆಗೆ ಮೋಸಹೋಗಬಾರದು. ಮಣ್ಣಿನ ಕುರಿತಾದ ನಮ್ಮ ಹೆಚ್ಚಿನ ತಿಳಿವಿನಿಂದ ನಾವು ಪರಿಪೂರ್ಣರಾಗಿ ಮಣ್ಣಿನ ಸಾರಪಾಲನೆ ವ್ಯಕ್ತಿಯ ಮತ್ತು ರಾಷ್ಟ್ರದ ಮುಖ್ಯ ಹೊಣೆಗಳ ಸಾಲಿನದೆಂದು ಭಾವಿಸಬೇಕು. ಅಷ್ಟುಮಾತ್ರವೇ ಅಲ್ಲ ಈ ಹೊತ್ತಿನಿಂದಲೇ ಪ್ರಕೃತಿಯೊಡನೆ ನಡೆವ ನಮ್ಮ ವ್ಯವಹಾರದಲ್ಲಿ ಸಮತೂಕವನ್ನು ತಂದೇ ಬಿಡುವೆವೆಂದು ಪಣತೊಡಬೇಕು. ಆರ್ಥಿಕ ಲಾಭವೊಂದೇ ಗುರಿಯಾಗಿರುವ ಮನುಷ್ಯನ ರೊಕ್ಕದ ಗಣಿತವೆಲ್ಲ ಜೀವಶಾಸ್ತ್ರದ ಬಂಡೆಯ ಮೇಲೆ ಅಪ್ಪಳಿಸಿ ನುಚ್ಚುನೂರಾಗುವುದರಿಂದ ಕ್ಷಿಪ್ರಲಾಭವನ್ನು ಪಡೆದು ಆತ ಸ್ವತಃ ಬಹಳಕಾಲ ಅದನ್ನು ಉಪಯೋಗಿಸುವಂತಿಲ್ಲ. ಹೀಗೆ ಸ್ವಹಿತ ದೃಷ್ಟಿಯಿಂದಲೂ ಪ್ರಕೃತಿಯ ಸಾರಪಾಲನೆ ಪ್ರಾಶಸ್ತ್ಯ ಪಡೆಯುವುದು.

ಈ ಸರಳವಾದ ತತ್ತ್ವವನ್ನು ಟೆನಸಿ ಕಂದರದ ಒಕ್ಕಲಿಗರಿಗೆ ಟೀವೀಏ ಹೊಸದಾಗಿ ಹೇಳಬೇಕಾದ ಪ್ರಸಂಗವೇನೂ ಇಲ್ಲವಾದರೂ, ತಿಳಿದೂ ತಿಳದು ಒಕ್ಕಲಿಗಜನ ಕಾಳನ್ನೂ, ಹತ್ತಿಯಕಾಳನ್ನೂ ಬೆಳಸಿ, ಬಯಲುನಾಡಿನ ಸಾರವನ್ನು ಕೊರೆದು ನಾಶಗೊಳಿಸಿ, ತಮ್ಮ ಕಾಲಿಗೆ ತಾವೇ ಕೊಡಲಿ ಇಕ್ಕಿಕೊಂಡುದನ್ನು ನೋಡಿದರೆ, ತಮ್ಮ ಮಕ್ಕಳ ಭವಿಷ್ಯಕ್ಕೆ ಮೃತ್ಯುವಾಗುವುದನ್ನು ಕಂಡರೆ, ಎಷ್ಟು ಪಶ್ಚಾತ್ತಾಪವಾಗಬೇಡ?

ಹಾಗೆ ನೋಡಿದರೆ ಅವರನ್ನು ದೂರಿಯೂ ಪ್ರಯೋಜನವಿಲ್ಲ. ಬೇಸಗೆಯ ಋತುವಿನಲ್ಲಿ ಸಾಲಾಗಿನೆಟ್ಟು ಬೆಳಸಲಾಗುವ ಕಾಳು, ಹತ್ತಿಯಕಾಳು, ಹೊಗೆಸೊಪ್ಪು ಇವಿಷ್ಟೇ ಅವರ ನೆಲದಲ್ಲಿ ಬೆಳೆಯುವುವು. ಎಕರೆಯೊಂದಕ್ಕೆ ಉತ್ಪನ್ನವು ತೀರ ಕಡಮೆ ಇರುವಾಗ ಇದ್ದ ನೆಲವನ್ನು ವಿವಿಧ ಉತ್ಪತ್ತಿಗಳಿಗೂ, ಹಸುವಿನ ಮೇವಿಗೆ ಬೇಕಾದ ಹುಲ್ಲಿಗೂ ಉಪಯೋಗಿಸಬೇಕೆಂದು ಪರೋಪದೇಶಮಾಡಿದರೆ ಏನುತಾನೇ ಸಾಧ್ಯವಾದೀತು? ಕೃಷಿ ಇಲಾಖೆಯವರು ಧರ್ಮಾರ್ಥ ಕೊಡುವಂಥ ಈ ಬಗೆಯ ಉಪದೇಶವಾಕ್ಯಾವಳಿಯಿಂದ ಒಕ್ಕಲಿಗ ಜನ ಬೇಸತ್ತು ಈಗಾಕಡೆಕಿವಿಕೊಡುವುದನ್ನೇ ನಿಲ್ಲಿಸಿದ್ದಾರೆ. ಒಂದನೆಯದಾಗಿ, ಸುಣ್ಣ, ಫೋಸ್ಫೇಟಗಳಿಲ್ಲದೆ ಸಾರವರ್ಧಕ ಧಾನ್ಯಗಳನ್ನಾಗಲೀ, ಹುಲ್ಲನ್ನಾಗಲಿ ಬೆಳೆಸುವುದೆಂತು? ಎರಡನೆಯದಾಗಿ ಆ ಗೊಬ್ಬರಗಳು ಸಿಗುವಂತಿದ್ದರೂ ಬೇಕಾದ ಬಂಡವಲವನ್ನೆಲ್ಲಿಂದ ತರೋಣ? ಮೂರನೆಯದಾಗಿ, ಅಲ್ಲದೆ ಮುಖ್ಯವಾಗಿ, ಕೃಷಿಯ ಪರಿವರ್ಧಿತ ಸಂಸ್ಕರಣಕ್ಕೆ ಬೇಕಾದ ಜ್ಞಾನದರ್ಶನವೂ, ಮಾರ್ಗದರ್ಶನವೂ ಹೇಗೆ ಲಭಿಸೀತು?

ಅಮೇರಿಕದ ಕಾಂಗ್ರೆಸ್ಸಿನಿಂದ ಅಧಿಕೃತಿಯನ್ನು ಪಡೆದುಕೊಂಡು ಟೇವೀಏ ಕಾರ್ಯಪ್ರವೃತ್ತವಾದಾಗ ಮಾತ್ರ ಈ ಮಹಾ ವಿಘ್ನಗಳು ತೊಲಗಿ ದೂರಸರಿದುವು. ಕೃಷಿಪ್ರಯೋಗ ತಜ್ಞರೂ, ನವಶಿಕ್ಷಿತ ಕೃಷಿ ಇಲಾಖೆಯ ಅಧಿಕಾರಿಗಳೂ, ಫೋಸ್ಫೇಟ್ ಒದಗಿಸಿ, ಅದರ ಉಪಯೋಗದ ವಿವರಗಳನ್ನು ತಿಳಿಹೇಳಿ, ಉಚಿತ ಮಾರ್ಗದರ್ಶನ ಮಾಡಿದಾಗ ಇದ್ದೆಲ್ಲ ವಿಡ್ಮೂರಗಳು ಮಾಯವಾಗಿ ಟೆನಸಿ ಕಂದರದ ಜನ, ಪ್ರಗತಿ ಪರವಾದ ಸಾರಪಾಲನೆಯ ಹಾದಿ ಹಿಡಿಯಿತು.

ಟೆನಸಿ-ಕಂದರ ಒಂದರಲ್ಲಿಯೇ ೧೯೪೭ನೆಯ ಸಾಲಿನಲ್ಲಿ ೩೧,೮೦೦ ಪ್ರತ್ಯಕ್ಷವಾಗಿ ಕಾರ್ಯಮಾಡುತ್ತಿರುವ ಪ್ರಯೋಗ ಪರೀಕ್ಷೆಯ ಕೃಷಿಕ್ಷೇತ್ರಗಳಿದ್ದವು. ಇದನ್ನು ಬಿಟ್ಟರೆ ಉಳಿದ ಸಂಯುಕ್ತರಾಷ್ಟ್ರದಲ್ಲಿ ಬರಿಯ ೯೮೦೦ ಪ್ರಯೋಗ ಕ್ಷೇತ್ರಗಳು. ಈ ದೊಡ್ಡ ಭೇದವನ್ನು ಎಲ್ಲರೂ ಗಮನಿಸಿದರೆ ಟೆನಸಿ ಕಂದರದ ಪ್ರಗತಿಗೆ ಬೇರೆ ಕಾರಣಬೇಕೆ?

## ಪ್ರಕೃತಿಯ ಮಾಟ:

ಮಿಲಿಯಾಂತರ ವರ್ಷಗಳ ಹಿಂದೆ ಈಗ ಟೆನಸಿ ಕಂದರ ಇರುವ ಸ್ಥಳದಲ್ಲಿ ಸಮುದ್ರ ಇದ್ದುದರಿಂದ, ಇಗಿನ ಈ ಕಾವಿಬಣ್ಣದ ಮಣ್ಣಿನಲ್ಲಿ ಆಗಿನ ಆ ಜೀವರಾಶಿಯ ಸತ್ತ್ವವೆಲ್ಲ ಅಡಕವಾಗಿದೆ. ಸಾರವತ್ತಾದ ಟೆನಸಿ ಮಣ್ಣು ಇತಿಹಾಸದಾಚೆಗಿನ ಯುಗದಿಂದಲೂ ಉತ್ತಮವಾದ ಹುಲ್ಲು ಬೆಳೆಯುವುದಕ್ಕೆ ಹಿತವಾಗಿದೆ. ಕಾಡುಕೋಣಗಳ ದೊಡ್ಡದೊಡ್ಡ ಹಿಂಡೂ, ಜಿಂಕೆಗಳು ಸ್ವಚ್ಛಂದವಾಗಿ ಓಡಾಡುತ್ತಿದ್ದ "ಇಂಡಿಯನ್ ಹುಲ್ಲುಗಾವಲು" ಎಂದರೆ ಇದೇ. ಹದಿನೆಂಟನೆಯ ಶತಮಾನದಲ್ಲಿ ವಿಲಾಯತಿಯಿಂದ ಬಂದಿಳಿದ ಬಿಳಿಜನ ಅಪಲೇಟಿಯನ್ ಗುಡ್ಡಗಾಡನ್ನು ಹಾದು ಟೆನಸಿ ಭೂಮಿಗೆ ಬಂದಾಗ ಆ ಭೂಮಿಯನ್ನು "ಕಪ್ಪಾದ ಕ್ರೂರಭೂಮಿ" ಎಂದು ವರ್ಣಿಸಿದರಂತೆ. ಹೌದು, ಭೂಮಿ ಯುಗ ಯುಗಾಂತರಗಳ ಸಸ್ಯ ಪದಾರ್ಥಗಳ ಕೊಳೆತದಿಂದ ಕಪ್ಪಾಗಿತ್ತು; ನೆಲದಡಿಯ ಖನಿಜಗಳ ಸಾರವೇ ಸಸ್ಯ ಪದಾರ್ಥಗಳು ಕೊಳೆಯಲು ಕಾರಣ. ಸುಣ್ಣ ಮತ್ತು ಫೋಸ್‌ಫೇಟಗಗಳಿಂದ ಪೂರಿತವಾದ ಈ ಫಲವತ್ತಾದ ಪ್ರದೇಶದಲ್ಲಿಯೇ ರೆಡ್‌ಇಂಡಿಯನ ಜನಕ್ಕೂ, ಬಿಳಿಜನಕ್ಕೂ ಕದನ ಕೋಲಾಹಲವು ಮಸಗಿ ನೆತ್ತರ ಹೊಳೆ ಹರಿದುದು ತೀರ ಸ್ವಾಭಾವಿಕವೇ. ಆದುದರಿಂದ ಈ ಟೆನಸಿ ಭೂಮಿಗೆ ಕುರುಕ್ಷೇತ್ರದಂತೆ ಕ್ರೌರ್ಯದ ಉಪಾಧಿಯೂ ದೊರೆಯಿತು. ಆದರೆ ಕದನಾನಂತರ ಧರ್ಮ ಸಂಸ್ಥಾಪನೆಯ ಬದಲು ಬಿಳಿಜನರ ಕೊಡಲಿ, ನೇಗಿಲು ಮತ್ತು ತುಪಾಕಿಯಿಂದಾಗಿ ಪ್ರಕೃತಿಧರ್ಮಕ್ಕೆ ಸಹಜವಾದ ಸ್ಥಿಮಿತವು ಉಳಿಯುವುದೂ ಗಡುತರವಾಯಿತು.

ಕೆಲವೇ ದಶಕಗಳಲ್ಲಿ ನೆಲದಸಾರ ಮಾಯವಾಯಿತು; ಕಾಡು ನಿರ್ನಾಮವಾಯಿತು; ನದಿಯ ಹುಲುಸಾದ ಮೀನುಗಾರಿಕೆಯ ಉದ್ಯಮ ನಾಶವಾಯಿತು. ಅಲ್ಪಮತಿಯ ಉಪದ್ವ್ಯಾಪವನ್ನೆತ್ತಿ ತೋರಿಸಲು ಟೆನಸಿ ಕಂದರದಂಥ ನಿದರ್ಶನಗಳು ಸಿಗುವುದು ದುರ್ಲಭ. ಫಲವತ್ತಾದ ಮಣ್ಣು ಟೆನಸಿ ನದಿಯ ನೀರು ಪಾಲಾಗುವುದನ್ನು ನಿಲ್ಲಿಸದಿದ್ದಲ್ಲಿಪೈರು,

ದನಕರು ಮತ್ತು ಜನಕ್ಕೆ ದುರ್ಗತಿಯಕಾಲ ಸಮೀಪಿಸಿತೆಂದು ಹೇಳಬ ಹುದು. ಎಷ್ಟೇ ಸಾಹಸದಿಂದ ಹೋರಾಡಿದರೂ ಪ್ರಕೃತಿಯ ಕೋಪದಿಂದ ಜನ ಪಾರಾಗಲಾರರು. ಮಣ್ಣು ಸಾರಹೀನವಾದ ಚಿಹ್ನೆಗಳೆಲ್ಲ ಪೈರಿನ ಲ್ಲಿಯೂ, ಜನಗಳ ಮೋರೆಯಲ್ಲಿಯೂ, ದನಕರುಗಳ ಶರೀರದಲ್ಲಿಯೂ ಮೂಡಿಬಂದಿವೆ: ಪೈರು ಹಸಿವಿನಿಂದ ಬೆಂಡಾಗಿದೆ; ದನಕರುಗಳು ಹಸಿವಿ ನಿಂದ ಬಳಲಿ ಕೃಷವಾಗಿವೆ; ಜನ ಹಸಿವಿನಿಂದ ಕಂಗೆಟ್ಟಿದ್ದಾರೆ. ಹಲವಾರು ವರ್ಷಗಳಿಂದ ನೆಲವನ್ನು ಜನ ಉಪಭೋಗಿಸುತ್ತ ಬಂದಿರುವುದೇ ಈ ಸಾರ್ವತ್ರಿಕ ಭುಭುಕ್ಷೆಗೆ ಕಾರಣ.

ಆದರೆ ನಿರಾಶೆ ಸಲ್ಲದು. ಟೆನಸಿ ಕಂದರದ ಹವಾಮಾನ ಬೆಳೆಗೆ ಅತ್ಯಂತ ಯೋಗ್ಯವಾದುದು. ಬೆಟ್ಟದ ತಪ್ಪಲಿನಲ್ಲಿ ಮಳೆ ಬೀಳುವುದು ಹಿಮಾವೃತ ಭೂಮಿಯ ಮೇಲೇನೂ ಅಲ್ಲ. ಸಾಲಾಗಿ ನೆಡುವ ಪೈರನ್ನೇ ಭೂಮಿಯಲ್ಲಿ ಬಳಸಿಕೊಂಡರೆ, ಮಳೆನೀರು ಫಲವತ್ತಾದ ಮೇಲು ಮಣ್ಣನ್ನು ಕೊಚ್ಚಿಕೊಂಡು ಹೋಗಿ ನಾಶಕ್ಕೆ ಕಾರಣನಾಗುತ್ತದೆ. ಅದೇ ಭೂಮಿಯ ಮೇಲೆ ಹುಲ್ಲುಗರಿಕೆಯ ಹೊದಿಕೆಯಿದ್ದರೆ ಇಲಯ ಪ್ರವೃ ತ್ತಿಯ ಮಳೆನೀರು ಸಾರಸೃಷ್ಟಿಗೆ ಕಾರಣವಾದೀತು.

## ಕಾಂಗ್ರೆಸು ಹಾಕಿಕೊಟ್ಟ ಹಾದಿ:

ಭೂಗರ್ಭಶಾಸ್ತ್ರದಲ್ಲಿ ಹೇಗೋ ಇತಿಹಾಸದಲ್ಲಿಯೂ ಹಾಗೆಯೆ ಯಾವುದೂ ಅಕಾಸ್ಮಾತ್ತಾಗಿ, ಪೂರ್ಣ ನವೀನವಾಗಿ, ಸಂಭವಿಸು ವುದೆಂದಿಲ್ಲ. ಟೀವೀಏ ಕೂಡ ಅಂತೆಯೇ ನಿಧಾನವಾಗಿ, ಕನಿಷ್ಠ ಪಕ್ಷ, ಎರಡು ಶತಮಾನಗಳಿಂದಲಾಗಾಯಿತು ರೂಪುಗೊಂಡ ಯೋಜನೆ. ಟೆನಸಿ ಪ್ರದೇಶದಲ್ಲಿ ಆಗಿನ ಕಾಲಕ್ಕೆ ರಾಜಮಾರ್ಗಗಳಿ ಲ್ಲವಾದ ದೆಸೆಯಿಂದ ಪ್ರಯಾಣವೂ, ಸಾಮಾನಿನ ಆಮದು ರಫ್ತೂ ಜಲಮಾರ್ಗವಾಗಿಯೇ ಆಗಬೇಕಾಗಿತ್ತು. ಟೆನಸಿಯಿಂದ ಓಹಿಯೋಕ್ಕೆ ಸೇರಿ, ಅಲ್ಲಿಂದ ಮಿಸಿಸಿಪಿಯ ಹಾದಿಯಾಗಿ ಆಗ ಫ್ರೆಂಚರ ಕೈಯೊಳ ಗಿದ್ದ ನ್ಯೂ ಒ ರ್ಲಿ ನ್ ಯ ನ್ಸ್ ಬಂದರವನ್ನು ಮುಟ್ಟಬೇಕಾಗಿತ್ತು. ಸುಮಾರು ೧೮೨೪ರಲ್ಲಿ ಅಧ್ಯಕ್ಷ ಮನ್ರೋ ಕಾಂಗ್ರೆಸಿಗೆ ಕೊಟ್ಟ ಸಂದೇ

ಶದಲ್ಲಿ ಮುಸಲ್‌ಶೋಲ್ಸಿನ ಮೊದಲ ಪ್ರಸ್ತಾಪ ಬರುತ್ತದೆ. ಮುಸಲ್‌ಶೋಲ್ಸನ್ನು ಒಂದು ಸಾರಿಗೆಯ ಕೇಂದ್ರವಾಗಿ ಮಾಡಬೇಕೆಂದು ಅದರಲ್ಲಿ ನಿರೂಪಿಸಲಾಗಿತ್ತು. ಹೀಗೆ ಹತ್ತೊಂಭತ್ತನೆಯ ಶತಮಾನದಲ್ಲೆಲ್ಲ ಟೆನಸಿ ನದಿಯುದ್ದಕ್ಕೂ ಪ್ರವಾಸ ಸೌಕರ್ಯವನ್ನು ಹೆಚ್ಚಿಸುವ ಯೋಜನೆಗಳು ಸಿದ್ಧವಾದುವು.

ಜಲವಿದ್ಯುತ್ತು ಈ ಯೋಜನೆಗಳ ಒಡನೆ ಸೇರಿದ್ದು ೧೮೯೮ರಲ್ಲಿ. ಆದರೆ ಸರಕಾರವೂ ಖಾಸಗೀ ಉದ್ದಿಮೆಗಳೂ ಸೇರಿ ಜಲವಿದ್ಯುತ್ತಿನ ಉತ್ಪಾದನೆಗೆ ತೊಡಗುವುದಕ್ಕೆ ಕಾಂಗ್ರೆಸ್ಸಿನಲ್ಲಿ ತೀವ್ರ ವಿರುದ್ಧವಾದ ಚಳುವಳಿ ಆ ಕಾಲಕ್ಕೆ ಎದ್ದುದರಿಂದ ಯಾವ ಸೂಚನೆಯೂ ಆಗ ಮಾನ್ಯವಾಗಲಿಲ್ಲ. ೧೯೧೬ರಲ್ಲಿ ಪ್ರಥಮ ಮಹಾಯುದ್ಧ ಆರಂಭವಾದ ಗಂಡಾಂತರದ ಸನ್ನಿವೇಶದಲ್ಲಿ ಮಾತ್ರವೇ ಮುಸಲ್‌ಶೋಲ್ಸಿನಲ್ಲಿ ಒಡ್ಡುಹಾಕುವ ಯೋಜನೆಗೆ ಕಾಂಗ್ರೆಸಿನ ಒಪ್ಪಿಗೆ ದೊರೆಯುವಂತಾಯಿತು. ಸಿಡಿಮದ್ದಿಗೆ ಬೇಕಾಗುವ ನೈಟ್ರೇಟಿಗೆ ಚಿಲಿಯ ಮುಖನೋಡುವುದನ್ನು ಬಿಟ್ಟು ಸ್ವತಂತ್ರವಾಗಿ ಶೋಲ್ಸ್‌ನಲ್ಲಿ ನೈಟ್ರೇಟ್ ಉತ್ಪಾದನೆಮಾಡಲು ಜಲವಿದ್ಯುತ್ತು ಸಹಕಾರಿಯಾಯಿತು.

೧೯೧೧ರಲ್ಲಿ ಸಂಯುಕ್ತರಾಷ್ಟ್ರದ ಮಣ್ಣಿನ ಇಲಾಖೆಯವರು ದಕ್ಷಿಣ ಸಂ. ರಾಷ್ಟ್ರದ ಮಣ್ಣು ಬರಬರುತ್ತ ಸಾರಹೀನವಾಗುತ್ತಿರುವ ರಾಷ್ಟ್ರೀಯ ಗಂಡಾಂತರವನ್ನು ಸೂಚಿಸಿದರು. ಅದೇ ವರ್ಷ ಇನ್ನೊಂದು ಇಲಾಖೆ ಇದಕ್ಕೆ ಕಾಡು ನೆಡುವುದನ್ನು ಒಂದು ಪರಿಹಾರವಾಗಿ ಸೂಚಿಸಿತು. ಇದಕ್ಕೂ ನಾಲ್ಕುವರ್ಷ ಮೊದಲು ರಾಷ್ಟ್ರೀಯ ಜಲಮಾರ್ಗ ಸಮಿತಿಯ ತಜ್ಞರು "ಉಪನದಿಗಳ ಸಮೇತವಾಗಿ ಒಂದು ನದಿಯನ್ನು" ಸಮಗ್ರ ದೃಷ್ಟಿಯಿಂದ ನೋಡಬೇಕೆಂದು ನಿರ್ದೇಶಿಸಿದರು.

ಆದರೆ ಈ ಎಲ್ಲ ಸೂಚನೆಗಳು ಕಾರ್ಯರೂಪಕ್ಕೆ ಬರಲು ಇನ್ನೂ ಇಪ್ಪತ್ತು ವರ್ಷಕಾಲ ಹಿಡಿಯಿತು. ಈ ನಡುವೆ ಟೆನಸಿ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನಗಳ ಕೊಡಲಿ ಏಟಿನಿಂದಲೂ, ಆಗಾಗ ಏಳುತ್ತಿದ್ದ

ಕಾಡ್ಗಿಚ್ಚಿನಿಂದಲೂ ಟೆನಸಿ ಅರಣ್ಯ ಪ್ರದೇಶವೂ, ಭೂಸಂಪತ್ತೂ ಬರಡಾಗುತ್ತಿದ್ದುವು.

ಟೆನಸಿ ಕಂದರದ ಭೂಮಿ ಒಂದೆಡೆ ತುಂಬಾ ಇಳಿಜಾರಾಗಿಯೂ, ಇನ್ನೊಂದೆಡೆ ತುಸು ತುಸುವೇ ಇಳಿಯುತ್ತಲೂ ನಡೆದಿರುವುದರಿಂದ, ವರ್ಷವರ್ಷವೂ ಬೀಳುವ ಸುಮಾರು ೬೦೦೦ಟನ್ ಮಳೆ ಗೋರ್ಕಲ್ಲ ಮೇಲೆ ಬಿಡಿದಂತೆ ನಿರುಪಯೋಗಿಯಾಗಿ ಕಂಡ ಬಟ್ಟೆಯಲ್ಲಿ ಹರಿದು ಟೆನಸಿ ನದಿಯಮೂಲಕ ಸುತ್ತಲಿನ ಊರಿಗೆ ಉಪದ್ರವಮಾಡುತ್ತ ವ್ಯರ್ಥವಾಗಿ ಸಾಗರವನ್ನು ಸೇರುತ್ತಿತ್ತು. ಬಿದ್ದ ನೀರನ್ನು ಳಿಸಿಕೊಳ್ಳುವ ಯಾವ ಸಾಧನವೂ ಟೆನಸಿ ಜನಕ್ಕೆ ಎಷ್ಟೋ ಕಾಲ ಗೊತ್ತಿರಲಿಲ್ಲ.

ಏಕೀಕೃತ ಬೆಳವಣಿಗೆಯ ಸೂತ್ರವನ್ನು ಆಧರಿಸುವ ಯೋಜನೆಯಲ್ಲಿ ನೀರಿನ ನಿಯಂತ್ರಣವು ನೆಲದಲ್ಲಿಯೇ—ಅಂದರೆ ಮಳೆ ಬಿದ್ದಲ್ಲಿಂದಲೇ—ಆರಂಭವಾಗಬೇಕು. ಬೆಟ್ಟದ ತಪ್ಪಲು ಅರಣ್ಯಗಳ ಕಡಿತದಿಂದ ಬೋಳಾಗಿದ್ದು, ಹೊಲಗಳಲ್ಲಿ ಸಾಲಾಗಿ ನೆಡುವ ಪೈರಿದ್ದರೆ, ಓಟಕೀಳುತ್ತಿರುವ ಗಂಗೆಯನ್ನು ಹಿಡಿದು ನಿಲ್ಲಿಸುವ ಭಗೀರಥನ ಜಟೆ ಇಲ್ಲವಾಗುವುದು. ಬಿದ್ದ ನೀರೆಲ್ಲ ಹಾವಿನಂತೆ ಹರಿದು ನದಿಯಲ್ಲಿ ನೀರುಕ್ಕಿಸುವುದೊಂದೇ ಆಯಿತು. ಅಷ್ಟೇ ಅಲ್ಲ. ಮೇಲುಮಣ್ಣಿನ ಫಲವತ್ತಾದ ಸಾರಪದಾರ್ಥಗಳನ್ನು ನದಿಯ ನೀರಿಗೆ ಕಲಸಿ, ಆ ನೀರಿನ ಉಪಯೋಗಿತೆಯು ಬಹು ಮಟ್ಟಿಗೆ ಕಡಮೆಯಾಗುವುದು.

ಹೀಗಿರುವುದರಿಂದ ನೀರು ನೆಲದ ಮೇಲೆ ಬಿದ್ದಂದಿನಿಂದ ಅದು ನದಿಗೆ ಸೇರುವ ವರೆಗಿನ ಅದರ ಬಾಳುವೆಯನ್ನು ನಿಯಂತ್ರಿಸುವುದು ಟೀವೀಏಯ ಮುಖ್ಯ ಕಾರ್ಯಕ್ರಮಗಳಲ್ಲೊಂದಾಗಿದೆ. ಟೆನಸಿ ನದಿಯ ಪಾತ್ರದಲ್ಲಿ ನಾಲ್ಕಿಂಚಾದರೂ ಹೆಚ್ಚು ಮಳೆನೀರನ್ನು ಇಂಗಿಸಿಕೊಳ್ಳುವ ಏರ್ಪಾಡು ಮಾಡಿದಲ್ಲಿ, ಆ ನೀರಿನಿಂದುಂಟಾಗಬಹುದಾದ ಜಲಾಶಯವು ನೊರಿಸ್ ಜಲಾಶಯದಷ್ಟೇ ದೊಡ್ಡದಾಗುವುದು. ಅಲ್ಲದೆ ಬೇಸಾಯಕ್ಕೂ, ಕಾಡಿನ ಸಂರಕ್ಷಣೆಗೂ ಈ ಕಾರ್ಯಕ್ರಮ ಅತ್ಯಾವಶ್ಯಕವಾಗಿದೆ. (೧) ಕಾಡು ಮತ್ತು ಬೇಸಾಯದ ನೆಲವು ನಿರಂತರವಾಗಿ ಫಲಕೊಡುವ

ಸಾಮರ್ಥ್ಯ ಉಳ್ಳುವಾಗಿ ಜನಜೀವನವು ಸುಕರವಾಗುತ್ತದೆ. (೨) ನದೀ ಜಲದಲ್ಲಿ ಮಣ್ಣುಬೆರೆಯುವುದು ಕಡಮೆಯಾಗುವುದರಿಂದ ಅಣೆಕಟ್ಟೆಗೆ ಅಂಟಿಕೊಳ್ಳುವ ಕೆಸರನ್ನು ತೆಗೆಯುವ ವೆಚ್ಚವೂ ಕಡಮೆಯಾಗುವುದು.

## ಮಣ್ಣಿನ ಖನಿಜಗಳು:

ಟೇವೀಏ ರೈತರು ಫೋಸ್‌ಫೇಟ ಗೊಬ್ಬರವನ್ನು ಮೊದಲಬಾರಿ ತಮ್ಮ ಪರೀಕ್ಷಾ-ಪ್ರದರ್ಶನ ಕೃಷಿಕೇಂದ್ರಗಳಲ್ಲಿ ಉಪಯೋಗಿಸಿದಾಗ ದನಕರುಗಳೆಲ್ಲ ಗೊಬ್ಬರಹಾಕಿದ ಹುಲ್ಲುಗಾವಲಿಗೆ ಸೀದಾ ನಡೆದು ಅದನ್ನು ಗಬಗಬನೆ ತಿಂದು ಮುಗಿಸಿದ ಮೇಲೆಯೆ, ಗೊಬ್ಬರ ಉಪಯೋಗಿಸದ ಹುಲ್ಲಿಗೆ ಬಾಯಿ ಹಾಕುವ ಒಂದು ವಿಚಿತ್ರ ವರ್ತನೆ ಕಂಡುಬಂತು. ನಿಜವೇ. ಪಶುಗಳಿಗೂ ಆರೋಗ್ಯ ನಿರ್ಣಾಯಕವಾದ ೫% ಖನಿಜಗಳ ಹೊಲಬಿದೆ. ಅಂತೆಯೇ ಸಸ್ಯಜಾತಿಗೂ ಈ ನಿರ್ಣಾಯಕವಾದ ೫% ಖನಿಜಕ್ಕೂ ತುಂಬಾ ಮಮತೆ. ಅದಕ್ಕಾಗಿ ಅವು ಹಸಿದಿರುತ್ತವೆಂದರೂ ಸಲ್ಲುವುದು.

ಇದರ ಕುರಿತಾಗಿ ವಿಶೇಷ ಪರಿಶೀಲನೆ ನಡೆಯಿಸಿದವರಲ್ಲಿ ಈಗ ಯುನೋದ ಆಹಾರ ಮತ್ತು ಕೃಷಿಸಂಸ್ಥೆಯ ನಿರ್ದೇಶಕರಾದ ಸರ್ ಜಾನ್ ಬಾಯ್ಡ್ ಓರ್‌ರು ಪ್ರಮುಖರು. ಅವರು ೧೯೨೬ರಲ್ಲಿ ನಡೆಯಿಸಿದ ಸಂಶೋಧನೆಗಳ ಫಲವಾಗಿ ಬರೆದ ಪುಸ್ತಕವು ಮಣ್ಣಿನ ಸಾರಪಾಲನೆಯ ವಿಷಯವಾಗಿ ಅತ್ಯಂತ ಮಹತ್ತ್ವದ್ದಾಗಿದೆ. ಖನಿಜದ ಕೊರತೆ ಬರಿಯ ಟೆನಸಿಯ ಮಣ್ಣಿನಲ್ಲಿ ಮಾತ್ರವೇ ಅಲ್ಲ, ಪ್ರಪಂಚದ ಇತರ ಹುಲ್ಲುಗಾವಲುಗಳಿಗೂ ಸಾಧಾರಣವಾಗಿದೆ. ಹಾಲಿಗಿಂತಲೂ ಅತಿಶಯವಾದ ಖನಿಜ ಮತ್ತು ಜೀವಾತುಳ್ಳ ಮಣ್ಣು ಪ್ರಪಂಚದಲ್ಲೆಷ್ಟೋ ಕಡೆ ಇದೆ. ಕೆಂಟುಕಿಯ ನೀಲಿ ಹುಲ್ಲಿನ ಪ್ರದೇಶದಲ್ಲಿಯೂ, ಮಧ್ಯಟೆನಸಿಯ ಭೂಭಾಗದಲ್ಲಿಯೂ, ಹತ್ತಿರದ ಇತರ ಪ್ರದೇಶಗಳಿಗಿಂತ ಮೂರುಪಟ್ಟು ನಾಲ್ಕುಪಟ್ಟು ಹೆಚ್ಚು ಫೋಸ್‌ಫೇಟ್, ಸುಣ್ಣ ಮತ್ತು ಪೊಟೇಷ್ ಇವೆ. ಸ್ಕಾಟ್‌ಲೆಂಡಿನಲ್ಲಿ ಈ ಖನಿಜದ ಕೊರತೆ ಪರಮಾವಧಿಯನ್ನು

ಮುಟ್ಟಿದೆ. ಅಲ್ಲಿಯ ಖನಿಜಗಳೆಲ್ಲ ಮಾಂಸದ ರೂಪದಲ್ಲಿ—ಅಂದರೆ ಅವನ್ನು ತಿಂದು ಜೀರ್ಣಿಸಿದ ಕುರಿಮುಂದೆಗಳದು- ಹೊರನಾಡಿಗೆ ರಫ್ತಾಗುವುದರಿಂದ, ಎಷ್ಟೋ ಜಿಲ್ಲೆಗಳಲ್ಲಿ ಜೀವನಯಾಪನೆ ಅಸಾಧ್ಯವಾಗಿ ಜನಸಂಖ್ಯೆಯೇ ಕಡಮೆಯಾಗಿರುವುದೆಂದು ಬಾಯ್ಡ್ ಓರ್ರರು ಸಾರಿದ್ದಾರೆ. ಹಿಂದುಸ್ಥಾನದ ಕೋಟಿಗಟ್ಟಲೆ ಜನ ಅರೆಹೊಟ್ಟೆ ಊಟಮಾಡಲು ಒಂದು ಪ್ರಬಲವಾದ ಕಾರಣವು ಇದೇ ಎಂದು ಓರ್ರರ ಅಭಿಮತ. ಫೊಸ್ಫರಸ್ ಕೊರತೆ ಸಾರ್ವತ್ರಿಕವಾಗಿ ಹರಡಿದೆ. ಹಿಂದುಸ್ಥಾನದಲ್ಲಿ ಒಂದು ವಿಚಿತ್ರವಾದ ಸಂಗತಿ ಏನೆಂದರೆ ನಮ್ಮ ದೇಶ ಆಮದು ಮಾಡಿದಷ್ಟು ಫೊಸ್ಫರಸ್ಸಿಗೆ ಬದಲಾಗಿ ಅಷ್ಟೇ ಬೆಲೆಯ ಎಲುಬನ್ನು ಪರದೇಶಗಳಿಗೆ ರಫ್ತುಮಾಡುತ್ತಿರುವುದು. ಆಸ್ಟ್ರೇಲಿಯೂದ ಕುರಿಮೇಯುವ ಹುಲ್ಲುಗಾವಲಿನ ಕತೆಯೂ ಹೀಗೆಯೆ. ಓರ್ರರು ೧೯೨೪ರಲ್ಲಿ ಹಾಕಿದ ಗಣಿತದ ಪ್ರಕಾರ ಈಗ್ಗೆ ೬೦ವರ್ಷಗಳಿಂದ ಮಾಂಸ ಮತ್ತು ಇತರ ಪ್ರಾಣಿ ಉತ್ಪತ್ತಿಯ ದೆಸೆಯಿಂದಾಗಿ ವಿಕ್ಟೋರಿಯಾ ಪ್ರಾಂತ್ಯದ ಮಣ್ಣಿನಲ್ಲಿ ೩೫೦,೦೦೦ ಫೊಸ್ಫೋರಿಕ್ ದ್ರಾವಕವು ನಷ್ಟವಾಗಿದೆ. ಆಫ್ರಿಕದ ದನಕರುಗಳು ಖನಿಜದ ಕೊರತೆಗೆ ತಮ್ಮ ದೇಹವನ್ನೊಗ್ಗಿಸಿಕೊಂಡಿರುತ್ತವೆ. ಅಂದರೆ ಕುಳ್ಳಗಾಗಿ, ಗಾತ್ರಕಡಮೆಯಾಗಿ ಬದುಕಿಕೊಂಡಿವೆ; ಆದರೆ ಖನಿಜದ ಕೊರತೆಯಿಂದ ಬರುವ ಪಶುರೋಗಗಳಿಗೇನೂ ಕಡಮೆಯಿಲ್ಲ.

ಉತ್ತಮವಾದ ಅಧುನಿಕ ತಳಿಯ ಪಶುಗಳ ಪಾಲನೆ ನಡೆಯುವುದು ಪ್ರಪಂಚದಲ್ಲಿ ಖನಿಜೈಶ್ವರ್ಯದಿಂದ ತುಂಬಿದ ಭೂಭಾಗದಲ್ಲಿ ಮಾತ್ರ ಸಾಧ್ಯ. ಅರೇಬಿಯೂದ ಕುದುರೆಗೆ ಪರ್ಶಿಯಾದಲ್ಲಿ ಬೆಳೆಯುವ ಸಾರವತ್ತಾದ ಅಲ್ಫಾಲ್ಫಾ ಹುಲ್ಲುಗರಿಕೆಯೇ ಕಾರಣ. ಕುದುರೆ ಜೂಜಿನಲ್ಲಿ ವಿಜಯಪಡೆಯುವ ಕುದುರೆಗಳೆಲ್ಲ ಬಹಳಮಾಡಿ ಖನಿಜಸಂಪತ್ತು ಹೇರಳವಾಗಿರುವ ನೆಲದಲ್ಲೇ ಬೆಳೆದುವು. ಟೆನಸಿ ಕಂದರದ ಕೆಂಟುಕಿ ಕುದುರೆ ಜೂಜಿಗೆ ಉಪಯೋಗಿಸಲ್ಪಡುತ್ತಿರುವುದಕ್ಕೆ ಕೆಂಟುಕಿಯ ಫೊಸ್ಫೇಟ್‌ಭರಿತವಾದ ಮಣ್ಣೇ ಕಾರಣ.

ಮಣ್ಣಿನಲ್ಲಿ ಖನಿಜದ ಕೊರತೆಯ ಪ್ರಮಾಣವನ್ನು ಶೋಧಿಸುವ ಕಾರ್ಯ ಸಂಯುಕ್ತರಾಷ್ಟ್ರವಲ್ಲೇ ತೊಡಗಿದುದು ೧೯೪೦ರಲ್ಲಿ ಎಂದಾಗ, ಅಂಥ ಮನೋವೃತ್ತಿ ಹಿಂದುಳಿದ ರಾಷ್ಟ್ರಗಳ ಸರಕಾರಗಳಿಗೆ ತಲೆಹೋಗ ಬೇಕಾದರೆ ಇನ್ನೆಷ್ಟು ದಶಕಗಳು ಬೇಕೋ ತಿಳಿಯದು. ಆದರೂ ಜೀವನ-ಮರಣದ ಗಂಭೀರ ಪ್ರಶ್ನೆ ಇಲ್ಲಿ ಅಡಕವಾಗಿರುವುದನ್ನು ಓರ್‍ರು ಕಾಲುಶತಮಾನ ಹಿಂದೆಯೇ ಎಚ್ಚರಿಕೆಗಾಗಿ ಬರೆದ ಪುಸ್ತಕದಿಂದ ವಿಚಾರ ವಂತರು ತಿಳಿದುಕೊಳ್ಳಬಹುದು.

ಮಣ್ಣಿನಲ್ಲಿಯೂ, ಸಸ್ಯದಲ್ಲಿಯೂ, ಪ್ರಾಣಿಗಳಲ್ಲಿಯೂ ಏಕಪ್ರಕಾರ ವಾಗಿ ಎದ್ದು ತೋರುವ ಈ ಕೊರತೆಯ ಅಂತ್ಯ ಪರಿಣಾಮವೇನು? ಮಾನ ವನ ಆಹಾರ ಆರೋಗ್ಯಕ್ಕೆ ಇದರಿಂದ ಯಾವ ತರದ ಹಾನಿಯುಂಟು? ಎಂಬ ಪ್ರಶ್ನೆಯ ಮಹತ್ತ್ವವನ್ನು ಈಗಾಗಲೇ ಹೇಳಿದ ನಿದರ್ಶನಗಳಿಂದ ತಿಳಿಯಬಹುದಾದರೂ, ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸುವ ಅಗತ್ಯ ವಿದೆ. "ನ್ಯೂಯಾರ್ಕಿನಂಥ ನಗರದಲ್ಲೇ ೧೯೦೭ಕ್ಕಿಂತ ೧೯೩೬ರಲ್ಲಿ ಹೃದ್ರೋಗವು ನೂರಕ್ಕೆ ಅರುವತ್ತರಷ್ಟು ಹೆಚ್ಚಿತೆಂದೂ, ಆಹಾರದಲ್ಲಿ ಸಾರ ಸಂಪತ್ತು ಕಡಮೆಯಾದುದರಿಂದ ಅಮೇರಿಕದ ಜನರ ಆರೋಗ್ಯ ಇಳಿ ಮುಖವಾಗಿದೆಯೆಂದೂ, ಇದಕ್ಕೆಲ್ಲ ಖನಿಜಗಳ ಕೊರತೆಯೇ ಹೊಣೆ ಯೆಂದೂ" ಸಾರುವ ಅಮೆರಿಕನ್ ತಜ್ಞರಿದ್ದಾರೆ. ಆಧರೆ ಖನಿಜದ ಕೊರತೆ ಯೊಂದೇ ಅವನತಿಗೆ ಕಾರಣವಾಗಲಾರದಾದರೂ, ಪ್ರಪಂಚದ ಆರೋಗ್ಯ ಉಳಿಯ ಬೇಕಾದರೆ ಕೃಷಿಪದ್ಧತಿಯಲ್ಲಿ ವಿಶೇಷ ಬದಲಾವಣೆಗಳೂ, ಭೂಗತ ಖನಿಜಗಳ ಉಪಯೋಗದಲ್ಲಿ ಪರಿವರ್ಧಿತ ವಿಧಾನಗಳೂ ಜಾರಿ ಯಲ್ಲಿ ಬರಬೇಕೆಂಬುದು ನಿರ್ವಿವಾದವಾದ ಸಂಗತಿ.

ಒಳ್ಳೆಯ ಹುಲ್ಲುಗಾವಲು ಪ್ರಪಂಚದ ಹೆಚ್ಚು ಹೆಚ್ಚು ಭಾಗದಲ್ಲಿ ಹಬ್ಬಿ ಒಂದನೆಯದಾಗಿ ಮಣ್ಣಿನ ಸಾರ ರಕ್ಷಣೆಯೂ, ಎರಡನೆಯದಾಗಿ ಮಾಂಸ ಮತ್ತು ಕ್ಷೀರೋತ್ಪನ್ನಗಳ ಹೆಚ್ಚಳವೂ ಅಗತ್ಯವಾಗಿ ಆಗಬೇಕಾ ಗಿರುವುದು. ಆದರೆ ಜನದ ಬೇಡಿಕೆಯ ಮಟ್ಟಕ್ಕೆ ಹುಲ್ಲುಗಾವಲು ಫಲವ ತ್ತಾಗುವುದು ಕಠಿಣವೆಂದು ಬಾಯ್ಡ್ ಓರ್‍ರೇ ಹೇಳಿರುವುದರಿಂದ ಜೀವ

ದಾಯಿನಿಗಳಾದ ಸುಣ್ಣ, ಫೋಸ್‌ಫೇಟ ಮುಂತಾದ ಮೃತ್ ಖನಿಜಗಳನ್ನು ಭೂಮಿಗೆ ಸೇರಿಸಬೇಕು. ಒಟ್ಟಾರೆ ಮೇಲೆ, ಕೃಷಿ, ಪಶುಪಾಲನೆ ಮತ್ತು ಮನುಷ್ಯನ ಆಹಾರ ಪದ್ಧತಿ ಇವು ಮೂರು ಒಕ್ಕೂಟವಾಗಿ ಬೆಳೆದು ರಾಷ್ಟ್ರೀಯ ಆರೋಗ್ಯಕ್ಕೆ ತಳಹದಿಯಾಗಬೇಕು.

ಯಾವ ಸಸ್ಯವನ್ನು ವಿಭಜಿಸಿದರೂ ಅದರಲ್ಲಿ ಸುಮಾರು ೯೫% ಪಿಷ್ಟ, ಕೊಬ್ಬು, ನೀರು ಇತ್ಯಾದಿ ಪದಾರ್ಥಗಳೂ, ೫% ಖನಿಜ, ಜೀವಾತುಗಳೂ ಇರುವುದನ್ನು ನಾವು ಕಾಣುತ್ತೇವೆ. ಪ್ರಾಣಿಗಳ ಶರೀರದಲ್ಲಿಯೂ ಇದೇ ಪ್ರಮಾಣದಲ್ಲಿ ಖನಿಜ ಬೆರೆತಿದೆ. ಈ ನಿರ್ಣಾಯಕವಾದ ೫% ಖನಿಜವು ಮಾನವಜಾತಿಗೆ ಸುಸೂತ್ರವಾಗಿ ದೊರೆಯುತ್ತದೆಯೆ? ಇಲ್ಲವೆ? ಎಂಬ ಪ್ರಶ್ನೆಯ ಮೇಲೆ ಮಾನವ ನಾಗರಿಕತೆಯ ಭವಿಷ್ಯ ಹೊಂದಿಕೊಂಡಿದೆ. ಮೂಲಭೂತವಾದ ಈ ೫% ಖನಿಜವನ್ನು ನಾವು ಎಷ್ಟು ಮಿತವಾಗಿ ಎಷ್ಟು ಜತನದಿಂದ ಉಳಿಸಿಕೊಳ್ಳುತ್ತೇವೋ ಅಷ್ಟು ಮಟ್ಟಿಗೆ ನಾವು ಭೂಮಿಯ ಮೇಲೆ ಧೈರ್ಯವಾಗಿ ಬಾಳಿಯೇವೆಂದು ಎದೆತಟ್ಟಿ ಸಾರಬಹುದು.

### ಜಾಗತಿಕ ಹಸಿವಿಗೆ ದಿವ್ಯೌಷಧ; ಫೊಸ್ಫರಸ್:

ಮಣ್ಣು ಕೊರೆತವನ್ನು ನಿವಾರಿಸುವುದಕ್ಕೆ ನೆಲದಲ್ಲಿ ಫೋಸ್ಫೇಟ ಇರಬೇಕು. ಬೇರೆ ಬೇರೆ ಬಗೆಯ ಬೆಳೆಗಳನ್ನು ಬೆಳಸಿ ನೆಲದಲ್ಲಿನ ಸಾರವನ್ನು ಕಾಪಾಡುವುದಿಕ್ಕೂ ಮಣ್ಣಿನಲ್ಲಿ ಫೊಸ್ಫೇಟ ಇರತಕ್ಕದು. ಬೇರಿನಲ್ಲಿ ಸಾರಜನಕದೊಡನೆ ಬೆರೆಯುವ ಸ್ವಭಾವವುಳ್ಳ ಧಾನ್ಯಗಳನ್ನು ಬೆಳಸುವುದರಿಂದ ಸಾರರಕ್ಷಣೆಯೂ, ಭಿನ್ನ ಸಸ್ಯವೃದ್ಧಿಯೂ ಏಕಕಾಲಕ್ಕೆ ಆಗುವುದು. ಭಿನ್ನ ಸಸ್ಯಗಳನ್ನು ಬೆಳೆಸುವ ಬೇಸಾಯಗಾರರ ಜೀವನವು ಆರ್ಥಿಕವಾಗಿ ಹೆಚ್ಚು ಸುದೃಢವೂ, ಸಾಂಸ್ಕೃತಿಕವಾಗಿ ಹೆಚ್ಚು ಸಜೀವವೂ ಆಗುವುದರಲ್ಲಿ ಸಂದೇಹವಿಲ್ಲ. ಇಷ್ಟೆಲ್ಲ ಪ್ರಾಮುಖ್ಯವಾದ ಫೋಸ್ಫೇಟಿನ ಅಭಾವವೆಂದರೆ ಒಕ್ಕಲಿಗರ ಪಿಡುಗೇ ಸರಿ. ಇಂಥ ಪಿಡುಗಿನಿಂದ ರಕ್ಷೆ ಇದೆಯೆ?

ಪೈರು ಬೆಳೆಯಿಸಿ, ದನಕರುಗಳನ್ನು ಮೇಯಬಿಟ್ಟು ಮತ್ತು ನೀರ ಕೊರೆತವನ್ನು ತಡೆಯದೆ ಸಂಯುಕ್ತ ರಾಷ್ಟ್ರದಲ್ಲಿ ವರ್ಷ ಒಂದರ

೫,೫೦೦,೦೦೦ಟನ್ ಫೋಸ್ಫೇಟ ನಷ್ಟವಾಗುತ್ತಿದೆ. ಈ ನಷ್ಟವನ್ನು ತುಂಬಲು ಗೊಬ್ಬರದ ಮೂಲಕ ಬರಿಯ ೨,೫೦೦,೦೦೦ಟನ್ ಫೋಸ್ಫೇಟ ಮಾತ್ರ ಮರಳಿ ಮಣ್ಣಿಗೆ ಸೇರಿದರೂ ನಿವ್ವಳ ವಾರ್ಷಿಕ ನಷ್ಟವಾದ ೩,೦೦೦,೦೦೦ಟನ್ ಫೋಸ್ಫೇಟಿನ ಗತಿ ಏನು? ದುರ್ಗತಿ ತಾನೆ? ಆದರೆ ಇಂಥ ದುರ್ಗತಿ ಒಂದು ದೇಶಕ್ಕೆ ಸೀಮಿತವಾಗಿಲ್ಲ. ಇದೊಂದು ಅವ್ವಲ ದರ್ಜೆಯ ಜಾಗತಿಕ ಪಿಡುಗು.

ಈ ಪಿಡುಗು ನಿವಾರಣೆಗೆ ಬೇಕಾಗುವ ದಿವ್ಯೌಷಧವನ್ನು ತಯಾರಿಸುವುದರಲ್ಲಿ ಸಂಯುಕ್ತರಾಷ್ಟ್ರವು ಪ್ರಪಂಚದಲ್ಲೇ ಮೊದಲನೆಯದು. ಅದಕ್ಕೂ ಫೋಸ್ಫೇಟಕೊರತೆ ಇದ್ದೇ ಇದೆ. ಆದರೂ ನ್ಯಾಯಬದ್ಧವಾದ ಜಾಗತಿಕ ವಿತರಣೆಗೆ ಇಳಿಯುವುದಾದರೆ, ಸಂಯುಕ್ತರಾಷ್ಟ್ರ ತನ್ನ ತಯಾರಿಕೆಯ ೧,೮೫೦,೦೦೦ಟನ್ ತೂಕದ ಫೊಸ್‌ಫೇಟಿನಲ್ಲಿ ಸ್ವಲ್ಪ ಅಂಶವನ್ನಾದರೂ ಇತರ ದೇಶಗಳಿಗೆ ರಫ್ತು ಮಾಡಲೇ ಬೇಕೆಂದು ಎಫ್. ಏ. ಓ. ಕೂಡ ಅಭಿಪ್ರಾಯ ಪಡುತ್ತದೆ. ಅಲ್ಲದೆ ವೈಜ್ಞಾನಿಕ ಪ್ರಮಾಣದಲ್ಲಿ ಒಂದೆಕರೆಗೆ ವರ್ಷ ಒಂದಕ್ಕೆ ೧೭ರಾತಲು ಫೋಸ್ಫೇಟ್ ಉಪಯೋಗಿಸುವ ಪಕ್ಷಕ್ಕೆ ಬರಿಯ ಸಂಯುಕ್ತ ರಾಷ್ಟ್ರದಲ್ಲಿಯೇ ೩,೪೦೦,೦೦೦ಟನ್ ಖರ್ಚಾಗದೀತು.

ಅಂತೂ ದಿವ್ಯೌಷಧವೇನೋ ಕೈಗೆ ಬಂದಂತಾಯಿತು. ಅದನ್ನು ಯಾವ ಪ್ರಮಾಣದಲ್ಲಿ, ಹೇಗೆ, ಉಪಯೋಗಿಸಬೇಕೆಂಬ ಕುರಿತು ಸಾಕಷ್ಟು ಶಿಕ್ಷಣಪ್ರಸಾರ ಜಗತ್ತಿನಲ್ಲಿ ಎಲ್ಲೆಡೆಯೂ ಜರಗಬೇಕು. ಅಮೇರಿಕದ ಸಂಯುಕ್ತರಾಷ್ಟ್ರದಲ್ಲಿ ಈ ಬಗೆಯ ಸಾರ್ವತ್ರಿಕ ಶಿಕ್ಷಣವು ಹರಡಿ ೫೭೦೦೦ಜನ ರೈತರು ವಿಜ್ಞಾನಿಗಳಾದುದನ್ನು ಈ ಕೆಳಗೆ ಓದಬಹುದು.

## ಬೇರಿದ್ದಲ್ಲೇ ಪ್ರಯೋಗಶಾಲೆ:

ಟೆನಸಿ ಕಂದರದ ಫಲವತ್ತಾದ ಭೂಭಾಗದಲ್ಲಿ ಜನಸಂದಣಿ ವಿಪರೀತವಾಗುತ್ತ ನಡೆದಂತೆ ನೆಲವು ಸಾರಹೀನವಾಗುತ್ತ ಬಂತು. ಸುತ್ತಲಿನ ವೃಕ್ಷರಾಶಿಗೆ ಒದಗಿದ ವಿನಾಶವು, ಜನಜೀವನವನ್ನೂ ಹಾಳುಗೆಡವಿತು.

ನಿತ್ಯಜೀವನದ ಮಟ್ಟ ಇಳಿಮುಖವಾಗಿ ಹರಿಯಿತು. ಟೆನಸಿಕಂದರಕ್ಕೆ ಬಿಳಿಜನ ಸೇರಿದ ನೂರೈವತ್ತು ವರ್ಷಗಳಲ್ಲಿ ಇಂಥ ತೀವ್ರವಾದ ದುರ್ದಶೆ ಇಡಿ ಕಂದರವನ್ನಾವರಿಸಿತು.

ಟೀವೀಏ ಸ್ಥಾಪಿತವಾದ ೧೯೩೩ನೆಯ ಇಸವಿಯಲ್ಲಿ 'ಫೋರ್ಚ್ಯೂನ' ಪತ್ರಿಕೆ ಟೆನಸಿಪ್ರದೇಶದ ನಿರೀಕ್ಷಣೆಮಾಡಿ ಬರೆದುದು ಹೀಗೆ:

"ಹಳ್ಳಿಯ ಸಮಾಜ ದಿನದಿಂದ ದಿನಕ್ಕೆ ದಾರಿದ್ರ್ಯವಶವಾಗುತ್ತಿದೆ. ಕೇಳುವವರಿಲ್ಲ. ಬಂಜರುನೆಲ ನದಿಯ ನೀರಿಗಿಳಿದು, ಪ್ರಾಕೃತಿಕ ಜಲಾಶಯಗಳನ್ನು ಕೊಳಕುಮಾಡಿ, ಟೆನಸಿ ಕಂದರದ ಉಸಿರನ್ನೊತ್ತಿ ಹಿಡಿಯುತ್ತಿದೆ. ರೈತರ ಗೈಮೆಯ ವಿಧಾನ ತೀರ ಪುರಾತನವಾಗಿದೆ. ಕೃತಕ ಗೊಬ್ಬರದ ಸಲುವಳಿ ಆತನಿಗಿಲ್ಲ. ಶಕ್ತಿಯ ಪೂರೈಕೆ ಮೊದಲೇ ಇಲ್ಲ. ಆಹಾರ ತೀರ ಕಡಮೆ ತರಗತಿಯದು. ಹೊಟ್ಟೆಹುಳ ಮತ್ತು ವಾಂತಿಭೇದಿ ಸಾರ್ವತ್ರಿಕವಾಗಿ ಹರಡಿವೆ. ವರ್ಷಕ್ಕೆ ನೂರು ಡಾಲರಿನಲ್ಲಿ ಜೀವಿಸಬೇಕಾದ ಮಂದಿ ಬಹಳ ಇದ್ದಾರೆ."

ಹದಿಮೂರು ವರ್ಷದ ಹಿಂದೆ ಕಡುಬಡತನಕ್ಕೀಡಾಗಿದ್ದ ಬೆಟ್ಟಗಳ ನಡುವಿನ ನೆಲದಲ್ಲಿ ಈಗ ಟೀವೀಏ ರೈತ ಎಕರೆಗೆ ೬೦ ಬುಶೆಲ್ ಧಾನ್ಯ ಬೆಳೆಸಬಲ್ಲ. ಅಲ್ಲದೆ ಕೆಂಟುಕಿಯಲ್ಲಿ ಎಕರೆಗೆಷ್ಟು ನೀಲಿಹುಲ್ಲು ಬೆಳೆಯುವುದೋ ಅಷ್ಟೇ ಪ್ರಮಾಣದ ಹುಲ್ಲು ಈ ಗುಡ್ಡಗಾಡಿನಲ್ಲಿ ಬೆಳೆಯುತ್ತಿರುವುದು ಅತ್ಯಾಶ್ಚರ್ಯಕರ. ದನಕರುಗಳಿಗೆ ಇಡಿವರ್ಷವೂ ಮೇಯಲು ಹಸುರುಹುಲ್ಲು ದೊರಕಿಸುವುದರಿಂದ ಒಣಹುಲ್ಲಿನ ಅಗತ್ಯ ಇಲ್ಲದಂತಾಗಿದೆ. ಹೀಗೆ ಫೋಸ್ಫೇಟ ಉಪಯೋಗದಿಂದ ಇಳಿಜಾರಾದ ಬೆಟ್ಟದ ತಪ್ಪಲಲ್ಲಿ ಹುಲ್ಲನ್ನೂ, ದ್ವಿದಳ ಧಾನ್ಯಗಳನ್ನೂ ಬೆಳಸಿ ಮಣ್ಣುಕೊರೆತವನ್ನು ನಿಲ್ಲಿಸಿ, ಮಣ್ಣಿನ ಸಾರಬಂಡವಲನ್ನು ಕಾಪಾಡಿ, ತಮ್ಮ ಮಕ್ಕಳಿಗದನ್ನು ಬಿಟ್ಟುಹೋಗುವ ಪರಂಪರೆ ಈಗ ಸಾಮಾನ್ಯವಾಗಿ ನಡೆದಿದೆ.

ಈ ಮಹಾ ಪರಿವರ್ತನೆಗೆ ಕೃತಕ ಫೋಸ್ಫೇಟ್ ಒಂದು ಕಾರಣ; ಅದನ್ನು ಪ್ರಚಾರಮಾಡುವ ಶಿಕ್ಷಣ ಪ್ರಸಾರ ಎರಡನೆಯ ಕಾರಣ; ಪರೀ

ಕ್ಷಾ ಪ್ರದರ್ಶನ ಕೇಂದ್ರಗಳಲ್ಲಿ ರೈತನ ಪ್ರತ್ಯಕ್ಷ ಪಾತ್ರವನ್ನು ಅಳವಡಿಸಿ ಕೊಂಡುದು ಮೂರನೆಯ ಪ್ರಬಲವಾದ ಕಾರಣ.

ರೈತರು ಪ್ರತ್ಯಕ್ಷವಾಗಿ ಭಾಗವಹಿಸುವುದರ ಪ್ರಾಮುಖ್ಯ ತಿಳಿಯಬೇಕಾದರೆ ಪರೀಕ್ಷಾ ಪ್ರದರ್ಶಕರೂ ಅವರ ನೆರೆಕರೆಯ ಇತರ ಜನಗಳೂ ಚರ್ಚೆಮಾಡುವ ಜಿಲ್ಲಾ ಸಮ್ಮೇಳನವನ್ನು ನೋಡಬೇಕು. ೧೯೪೯ರಲ್ಲಿ ನಾಕ್ಸ್‌ವಿಲೆಯ ಸಮೀಪದ ಟೆನಸಿ ವಿಶ್ವವಿದ್ಯಾನಿಲಯದ ಹೊಲದಲ್ಲಿ ನಡೆದ ಪೂರ್ವಟೆನಸಿಯ ೭೩ನೆಯ ವಾರ್ಷಿಕ ಸಭೆಯನ್ನು ನಿರೀಕ್ಷಿಸುವ. ೫೦೦ ಜನ ರೈತರ ಶ್ರೋತೃವರ್ಗ ಇದೀಗ ಕೃಷಿತಜ್ಞರೊಬ್ಬರ ಮಾತನ್ನು ಆಲಿಸಿ, ಬಳಿಕ ತಮ್ಮಲ್ಲೊಬ್ಬ ಕಾರ್ಯಜಾಣನ ಮಾತನ್ನು ಕೇಳಲು ಒಲಿಯುತ್ತಿದೆ. ವಾಶಿಂಗ್‌ಟನ್ ಜಿಲ್ಲೆಯ ಐವಾನ್‌ರೇಂಜ್ ಎಂಬ ಹೆಸರಿನ ತರುಣ ರೈತ ಕೂತಲ್ಲಿಂದ ಏಳುತ್ತಾನೆ.

"ನನಗೆ ಈಗ ೨೯ವರುಷ. ಹೊಲದಲ್ಲಿ ನನ್ನ ತಾಯಿ ಮತ್ತು ಇಬ್ಬರು ಅಣ್ಣ ತಮ್ಮಂದಿರಿದ್ದಾರೆ. ಒಟ್ಟು ನಮ್ಮ ಹೊಲದ ವಿಸ್ತೀರ್ಣ ೭೦ಎಕರೆ.

ನಾವು ಹೊಲವನ್ನು ತೆಗೆದುಕೊಂಡುದು ೧೯೨೭ರಲ್ಲಿ. ನನ್ನ ತಂದೆಗೆ ರೈಲು ಕೆಲಸಇತ್ತು. ನಾವು ಪಟ್ಟಣದಲ್ಲಿದ್ದವರು ತಂದೆಯ ಮರಣಾನಂತರ ಹಳ್ಳಿಗೆ ಬಂದೆವು. ನನ್ನಣ್ಣ ೧೯೩೫ರಲ್ಲಿ ಹೈಸ್ಕೂಲನ್ನು ಬಿಟ್ಟು ಹೊಲಗೆಲಸಕ್ಕೆ ಸುರುಮಾಡಿದ. ಟೆನಸಿ ವಿಶ್ವವಿದ್ಯಾನಿಲಯಕ್ಕೆ ಬರಬೇಕೆಂದು ನನಗಾಸೆ ಇದ್ದರೂ ಅದು ಪೂರೈಸಲಿಲ್ಲ.

೧೯೩೮ರಲ್ಲಿ ನನ್ನ ನೆರೆಹೊರೆಯ ರೈತಬಾಂಧವರು ನನ್ನನ್ನು ಪ್ರದರ್ಶಕನನ್ನಾಗಿ ಆರಿಸಿದರು. ಆ ದಿನ ನನಗೆ ಚೆನ್ನಾಗಿ ನೆನಪಿದೆ. ನಾನು ಮನೆಗೆ ಬಂದವನೇ ತಾಯಿಯಹತ್ತಿರ ನನ್ನ ಜೀವನ ಸಾರ್ಥಕವಾಯಿತು ಎಂದೆ.

ನಮ್ಮ ಹೊಲ ನೂರುವರ್ಷ ಹಳೆಯದು. ನಾವು ಅಲ್ಲಿಗೆ ಸೇರಿದ ವರ್ಷ ೫೬ಎಕರೆ ಜಮೀನಿನಲ್ಲಿ ೪೫ಎಕರೆಯಲ್ಲಿ ಮಾತ್ರ ಕಾಳು ಮತ್ತು ತಂಬಾಕು ಬೆಳೆಯುತ್ತಿತ್ತು. ಎಕರೆಯೊಂದಕ್ಕೆ ೧೫-೨೦ಬುಶೆಲ್ ಉತ್ಪನ್ನ.

ನಾನು ಪರೀಕ್ಷಾ ಪ್ರದರ್ಶಕನಾದ ವರ್ಷ ಲೆಕ್ಕಹಾಕಿ ನೋಡಿದೆ: ೨೭೪ಡಾಲರು ನಷ್ಟ. ಆ ಮೇಲೆ ಮೇಯುವ ಬಯಲಿಗೆ ಫೋಸ್ಫೇಟ ಹಾಕುವುದಕ್ಕೆ ಆರಂಭಿಸಿದೆವು. ಈಗ ಬಿಟ್ಟು ೩೫ಎಕರೆ ಜಮೀನಿನಲ್ಲಿ ಹುಲ್ಲು ಬೆಳೆಸುತ್ತೇವೆ. ಮೂರು ಎಕರೆ ಧಾನ್ಯ ಮತ್ತು ಹದಿನೈದು-ಹದಿನಾರೆಕರೆ ಅಲ್ಫಾಲ್ಫಾ ಕೂಡ ಇದೆ.

೫೨ ಎಂಗಸ್ ಜಾತಿಯ ಪಶುಗಳಿವೆ.

ಸಪಾಟಾದ ಭೂಮಿ ನಮ್ಮ ಹೊಲದಲ್ಲಿ ೩-೪ಎಕರೆ ಮಾತ್ರ. ಉಳಿದುದು ೫೦% ಇಳಿಜಾರಾಗಿದೆ.

(ಶ್ರೋತೃವರ್ಗದಿಂದ ಪ್ರಶ್ನೆ: ಈ ಭೂಮಿಗೆ ಎಷ್ಟು ಗೊಬ್ಬರ ಸೇರಿಸಿದಿ?)

೧೯೩೮ರಿಂದ ನಾವು ಹಾಕಿದ ೧೬%ಫೊಸ್‌ಫೇಟ ೧೨೭॥ ಟನ್ನಾಗುವುದು.

(ಶ್ರೋತೃವರ್ಗ ಇದನ್ನಾಲಿಸಿ ಕೇಕೆ ಹಾಕಿತು.)

೫೬ ಎಕರೆ ಬಯಲುಭೂಮಿಯಲ್ಲಿ ಪ್ರತಿಯೊಂದು ಎಕರೆಗೂ ಒಂದೊಂದು ಟನ್ನಾದರೂ ೧೬%ಫೋಸ್ಫೇಟ ಬೀಳದೆ ಇಲ್ಲ. ಕೆಲವಕ್ಕೆ ಎರಡು ಮೂರು ಟನ್ ಬಿದ್ದುದೂ ಉಂಟು."

ಸರಿ, ಐವಾನ ಮುಗಿಸಿದೊಡನೆ ಪ್ರಶ್ನೋತ್ತರಗಳ ಸುರಿಮಳೆಗಾರಂಭವಾಯಿತು? ೭ವರ್ಷಕಾಲ ಎಕರೆಗೆ ಮೂರು ಟನ್ನಿನಂತೆ ಫೋಸ್ಫೇಟ್ ಹಾಕಿದರೆ ಹುಲ್ಲುನೆಲ ಸುಟ್ಟು ಹೋಗುವುದೆಂಬ ಭೀತಿ ಇಲ್ಲವೆ? ಹೌದು, ಜಾಗರೂಕತೆ ತಪ್ಪಿದ ಎಡೆಯಲ್ಲಿ ಬಿರುಕು ಬಿದ್ದಿತ್ತು. ಆದರೆ ಕೆಲವು ತಿಂಗಳೊಳಗೆ ಅದು ಗುಣವಾಯಿತು. ವೆಚ್ಚವೆಷ್ಟು? ಲಾಭವೆಷ್ಟು? ಅಷ್ಟು ಫೋಸ್ಫೇಟ ಉಪಯೋಗಿಸಿದರೆ ನಷ್ಟವಾಗದೆ? ಐವಾನನಿಗೂ ಆ ಭೀತಿಯುಂಟು. ಆದರೆ ಹೌದೋ ಅಲ್ಲವೋ ಎಂದು ಪರೀಕ್ಷಿಸಿ ನೋಡಬೇಕಷ್ಟೆ?

ಪ್ರಯೋಗಕೇಂದ್ರದ ಕೃಷಿತಜ್ಞರಿಗೂ, ಮಣ್ಣಿನ ರಾಸಾಯನಿಕರಿಗೂ ಕೂಡ ಇನ್ನೂ ಸ್ಪಷ್ಟವಾಗಿ ಹೇಳಲಾಗದ ಮಾತಿದು. ಬಡ ಐವಾನರೇಂಜ್ ಹೇಗೆ ತಿಳಿದಾನು?

ಐವಾನ ರೇಂಜನ ಪ್ರಯೋಗ ಟೆನಸಿ ಕಂದರದ ಪ್ರಥಮ ಪ್ರಯೋಗ ಗಳ ಸಾಲಿನದು. ಭೂಮಿ ಎಷ್ಟೇ ಇಳಿಜಾರಾಗಿದ್ದರೂ, ಬಿದ್ದ ನೀರಿನಲ್ಲಿ ಹೆಚ್ಚಿನಂಶ ನೆಲದಲ್ಲೇ ಹಿಡಿಯುತ್ತದೆ. ಚಳಿಗಾಲದ ಮೇವಿಗೂ ಬೇಕಾದ ಹುಲ್ಲನ್ನು ಬೆಳೆಸುವ ವ್ಯವಸ್ಥೆಗೆ ಐವಾನರೇಂಜ್ ಕೈಹಾಕಿ ದ್ದಾನೆ. ಆತ ಮೂರೇ ಎಕರೆ ಧಾನ್ಯ ಬೆಳೆಸಿದರೂ, ಒಂದೆಕರೆಗೆ ನೂರು ಬುಶೆಲ್ ಬೆಳೆಸಬಲ್ಲ.

ಹೀಗೆ ಐವಾನರೇಂಜ್ ಒಂದು ವೈಜ್ಞಾನಿಕ ಶೋಧನೆಯಲ್ಲಿ ತಲ್ಲೀ ನನಾಗಿದ್ದಾನೆ. ಇಂಥ ಶೋಧನೆಯಲ್ಲಿ ಮಗ್ನರಾಗಿರುವ ಸಾವಿರಾರು ಪರೀಕ್ಷಾಪ್ರದರ್ಶಕರು ಮತ್ತು ಕೃಷಿತಜ್ಞರುಗಳಲ್ಲಿ ಈತನೂ ಒಬ್ಬ. ಕಾಲೇಜಿನ ಮೆಟ್ಟಲು ಹತ್ತದಿದ್ದರೂ ಪ್ರಯೋಗಶಾಲೆಯ ನೇತೃವಾಗಿ ದ್ದಾನೆ.

ಇಂಥ ವಿಜ್ಞಾನಿ ರೈತರ ಸಂಖ್ಯೆ ೪೧,೬೦೦ಕ್ಕೂ ಮೀರಿದೆ. ೨೬ ಪ್ರಾಂತ್ಯಗಳಲ್ಲಿ ಅವರ ಹೊಲಗಳಿವೆ. ತುಂಬಾ ಜಮೀನುಳ್ಳ ರೈತರೂ ಇದ್ದಾರೆ, ಒಂದು ಹತ್ತೆಕರೆಯಿಂದಲೇ ಜೀವಿಸುವವರೂ ಇದ್ದಾರೆ. ಕೆಲವ ರಿಗೆ ಕಾಲೇಜಿನ ಡಿಗ್ರಿ ಇರಬಹುದು; ಹಲವರಿಗೆ ಇಲ್ಲದಿರಬಹುದು. ಆದ ರೂ ಪ್ರಜಾತಂತ್ರದ ಸಾಮಾನ್ಯವೇದಿಕೆಯ ಮೇಲೆ ಎಲ್ಲರೂ ಹೆಗಲಿಗೆ ಹೆಗಲು ಕೊಟ್ಟು ದುಡಿಯುತ್ತಿದ್ದಾರೆ.

ಟೆನಸಿ ಕಂದರದ ಒಂದರಲ್ಲೇ ೩೧,೮೦೦ ಪರೀಕ್ಷಾಪ್ರಯೋಗ ಕೇಂದ್ರಗಳಿವೆ.

## ಸಮೃದ್ಧಿಯ ಪಂಚಸೋಪಾನ:

ಕಳೆದ ಹದಿನೈದು ವರ್ಷಗಳಲ್ಲಿ ೫೮,೦೦೦ ಪ್ರದರ್ಶಕರು, ತಮ್ಮ ನೆರೆಹೊರೆಯವರ ಸಮೇತ, ಏರಿದ ಸಮೃದ್ಧಿಯ ಪಂಚಸೋಪಾನ ಗಳೆಂದರೆ ಈ ಐದು:

(೧) ಮಣ್ಣು, ನೀರು ಮತ್ತು ಪೈರಿನ ವ್ಯವಸ್ಥೆ. (ಭೌತಿಕ ರಾಸಾ ಯನಿಕ ಮತ್ತು ಸಸ್ಯಸಂಬಂಧಿ.) ಈ ವಿಷಯದ ವಿವರ ಈಗಾಗಲೇ ಕೊಟ್ಟಿರುತ್ತದೆ.

(೨) ಪಶುಪಾಲನೆ (ಜೀವಶಾಸ್ತ್ರಕ್ಕೆ ಸಂಬಂಧಿಸಿದ್ದು). ಸತ್ತ್ವ ಪೂರಿತವಾದ ಆಹಾರದ ಸರಬರಾಯಿಯಿಂದಾಗಿ ಪಶುಗಳ ಸಂಖ್ಯೆಯೂ, ಅವುಗಳ ಜಾತಿಯೂ ಉತ್ತಮವಾಗಬೇಕು.

(೩) ಶಕ್ತಿ ಮತ್ತು ಯಂತ್ರದ ವೃದ್ಧಿ (ಶಿಲ್ಪವಿಜ್ಞಾನ)

(೪) ರೈತನ ಕುಟುಂಬದ ಜನರ ಕಾರ್ಯ ಕುಶಲತೆಯನ್ನೂ, ಜ್ಞಾನವನ್ನೂ, ವಿಮರ್ಶಾ ಬುದ್ಧಿಯನ್ನೂ ಹೆಚ್ಚಿಸುವುದು. (ಸಮಾಜ ವಿಜ್ಞಾನ)

(೫) ಸಹಕಾರ ಪದ್ಧತಿಯ ಬೆಳವಣಿಗೆ.

೧೯೩೫ರಲ್ಲಿ ಟೆನಸಿ ಪ್ರದೇಶದಲ್ಲಿ ಮೂವತ್ತು ಎಕರೆಗೆ ಕೆಳಗಿನ ಹೊಲಗಳ ಸಂಖ್ಯೆ ೧೧೫,೦೦೦ ಇದ್ದಿರಬಹುದು. ಈ ಹೊಲಗಳು ಬರೇ ಹೊಟ್ಟೆಪಾಡಿನ ಹೊಲಗಳಾದುದರಿಂದ ರೈತರು ದೂರದ ಕ್ಲಿವ್‌ಲೆಂಡ, ಡೆಟ್ರ್ರೈಟ್ ಮಾತಾದ ಔದ್ಯೋಗಿಕ ಕೇಂದ್ರಗಳಲ್ಲಿ ಕೊಂಚಕಾಲ ಕೆಲಸಮಾಡಿ ಮರಳುವ ರೂಢಿ ಇತ್ತು. ಟೆನಸಿ ಪ್ರದೇಶದ ಜನಸಂಖ್ಯೆಯು ೧೯೩೦ರಿಂದ ೪೦ರ ನಡುವೆ ನೂರಕ್ಕೆ ೬·೨ರಷ್ಟು ಹೆಚ್ಚಿತು, ಒಂದೊಂದು ಜಿಲ್ಲೆಯಲ್ಲಿ ೨೫, ೩೦ರಷ್ಟು ಬೆಳೆದುದೂ ಉಂಟು.

ಈ ಹೊಲಗಳ ಪೈಕಿ ಲಾಭದಾಯಕವಾದುವೆಷ್ಟು? ನಷ್ಟದಲ್ಲೇ ನಡೆಯುವಂಥವೆಷ್ಟು? ಎಷ್ಟರಲ್ಲಿ ಕಾಡುಬೆಳೆಯಿಸಬಹುದು? ಎಂಬಿವೇ ಮೊದಲಾದ ಪ್ರಶ್ನೆಗಳನ್ನು ಉತ್ತರಿಸುವ ಮೊದಲು ನಾವು ಈ ಕೆಳಗಿನ ನಾಲ್ಕು ಮುಖ್ಯ ವಿಷಯಗಳನ್ನು ಗಮನಿಸತಕ್ಕುದು.

(೧) ಕೈಗಾರಿಕೆಗಳಲ್ಲಿ ಈ ಎಲ್ಲ ಜನರಿಗೂ ಕೆಲಸದೊರಕಿಸುವುದು ಕಷ್ಟವಾದೀತು.

(೨) ಈ ಜನ ಮನೆಗೆ ಅಂಟಿಕೊಂಡು ಬದುಕುವ ಸ್ವಭಾವವುಳ್ಳುದು.

(೩) ಜಮೀನು ಎಷ್ಟೇ ಸಾರಹೀನವಾದರೂ ಅವರಷ್ಟು ಭದ್ರವಾದ ವಸ್ತು ಬೇರಿಲ್ಲವೆಂಬುದು ರೈತನ ದೃಢವಿಶ್ವಾಸ.

(೪) ಈ ಹೊಟ್ಟೆಪಾಡಿನ ಜಮೀನನ್ನೇ ಆದರೂ ಬೇಸಾಯಮಾಡುವ ರೈತರು ಪಂಚ ಸೋಪಾನಗಳಲ್ಲಿ ಒಂದೆರಡನ್ನಾದರೂ ಕೆಲವು ವರ್ಷಗಳೊಳಗೆ ಏರಬಲ್ಲರು.

ಇದಕ್ಕೆ ನೊರಿಸ ಅಣೆಕಟ್ಟಿನ ದೆಸೆಯಿಂದ ಸ್ಥಳಬಿಟ್ಟು ಕದಲಬೇಕಾದ ಸುಮಾರು ೩೦೦೦ ಪರಿವಾರಗಳನ್ನು, ಉದಾಹರಣೆಯಾಗಿರಿಸಿಕೊಳ್ಳಬಹುದು. ಜಲಾಶಯದ ಸಮೀಪದಲ್ಲೇ ಅವರು ಮತ್ತೆ ಬೀಡು ಬಿಟ್ಟರು. ಈ ಹೊಸ ನೆಲದಲ್ಲಿ ಬೇರು ಗಟ್ಟಿಯಾಗಿ ಹಿಡಿಸದಿದ್ದರೂ, ೧೯೩೫ರಿಂದ ೩೯ರ ವರೆಗೆ ಅಲ್ಲಿ ನಡೆದ ಪರಿವರ್ತನೆಗಳನ್ನು ಟೆನಸಿ ವಿಶ್ವವಿದ್ಯಾನಿಲಯದ ಅಧಿಕಾರಿಗಳು ಪರಿಶೀಲಿಸಿದಾಗ ಆಯಕಟ್ಟಿನ ಕೆಲವು ಅಂಕೆ ಸಂಖ್ಯೆಗಳು ಗೋಚರಕ್ಕೆ ಬಂದುವು. ಅವರು ಪರಿಶೀಲಿಸಿದ ನೂರು ಪ್ರಯೋಗಕರ್ತರ ಪೈಕಿ ಹೆಚ್ಚಿನವರು ಮೊದಲನೆಯ ಮೆಟ್ಟಲನ್ನೇರಿಯಾಗಿತ್ತು. ಅರ್ಧವಾಸಿ ಜನ ಬೆಳೆಯಲ್ಲಿ ಪರಿಷ್ಕಾರವನ್ನೂ, ಭೂಮಿಯ ಉಪಯೋಗದಲ್ಲಿ ಹೊಸ ವಿಧಾನಗಳನ್ನೂ ಬಳಸಿಕೊಂಡಿದ್ದರು. ಐದರಲ್ಲೊಂದು ಜನ ಸೋಪಾನದ ತುತ್ತ ತುದಿಯನ್ನೇರಿದರು. ಒಟ್ಟು ಎಲ್ಲರ ಜೀವನದ ಮಟ್ಟವೂ ಹಿಂದಿಗಿಂತ ಎಷ್ಟೋ ಸುಧಾರಣೆ ಪಡೆದಿತ್ತು.

### ಸರ್ವತೋಮುಖವಾದ ಸುಧಾರಣೆ:

ಹೊಗಲಳಲ್ಲಿ ನಡೆದ ಸರ್ವತೋಮುಖ ಸುಧಾರಣೆಯನ್ನು ಟೆನಸಿ ಕಂಪರದಲ್ಲಿ ಕಾರ್ಯವನ್ನು ನಿರ್ದೇಶಿಸುವ ಏಳು ಸ್ಟೇಟ್ ಎಕ್ಸ್‌ಟೆನ್‌ಶನ್ ಸರ್ವಿಸುಗಳ ವರದಿಯಿಂದ ತಿಳಿಯಬಹುದು. ಕಾಳಿನ ಉತ್ಪತ್ತಿ ನೂರಕ್ಕೆ ೧೩ರಂತೆಯೂ, ಹುಲ್ಲು ನೂರಕ್ಕೆ ೩೩ರಂತೆಯೂ ಹೆಚ್ಚಿತು. ಟೆನಸಿ ಪ್ರಾಂತ್ಯದಲ್ಲಿ ಕರೆಯುವ ಪಶುಗಳ ಸಂಖ್ಯೆ ನೂರಕ್ಕೆಪ್ಪತ್ತರಷ್ಟು ಬೆಳೆಯಿತು. ಜಾರ್ಜಿಯಾದ ಹತ್ತಿಯ ಬೆಳೆ ಎಕರೆಗೆ ೨೭೫ರಾತಲಿದ್ದುದು ಎಕರೆಗೆ ೪೦೦ರಾತಲಾಯಿತು. ಟೆನಸಿ ಪ್ರಾಂತ್ಯದ ಹೆಮಿಲ್ಟನ್ ತಾಲೂಕಿನ ಒಂದು ನಿಗ್ರೋ ಸಮಾಜವು ಹಿಂದಿಗಿಂತ ಎಂಟುಪಾಲು ಹೆಚ್ಚು ಹುಲ್ಲು ಬೆಳೆಸಿತು. ಪಶುಪಾಲನೆಯೂ ಇದೇ ಪ್ರಮಾಣದಲ್ಲಿ ವೃದ್ಧಿಗೊಂಡಿತು.

೧೯೩೩ರಿಂದ ತೊಡಗಿ ಇಂದಿನವರೆಗೂ ಮಣ್ಣಿನ ಸುಧಾರಣೆಗೆ ಟೀವೀಏ ಅತ್ಯಂತ ಪ್ರಾಶಸ್ತ್ಯವನ್ನು ಕೊಟ್ಟಿದೆ.

ಹೇರಳವಾಗಿ ಮಳೆಬೀಳುವ ಈ ಪ್ರದೇಶದಲ್ಲಿ ಕಾಡು ಬೆಳೆಯಿಸುವ ಉದ್ಯೋಗ ಭರದಿಂದ ಸಾಗುತ್ತಿದೆ. ೧೪ಮಿಲಿಯ ಎಕರೆ .ಕಾಡುಪ್ರದೇಶದ ಪೈಕಿ ನೂರಕ್ಕೆ ನಲ್ವತ್ತರಷ್ಟು ಈಗಾಗಲೇ ರೈತರ ವಶದಲ್ಲಿದೆ, ಇನ್ನೂ ಹೊಸ ಹೊಸ ಅಗೆಗಳು ಮೇಲಕ್ಕೇಳುತ್ತಲೇ ಇವೆ. ಒಂದು ಅಗೆಯಿಂದ ವಾರ್ನೀಸು ಮಾಡಬಹುದು? ಇನ್ನೊಂದು ಹತ್ತಿಯ ಕಾರ್ಖಾನೆಯಲ್ಲಿ ಪ್ರಯೋಜನಕ್ಕೆ ಬರುತ್ತದೆ; ಮತ್ತೊಂದು ಕಾಡುಪ್ರಾಣಿಗಳ ಆಹಾರಕ್ಕಾಗಿ ನೆಟ್ಟುದು. ಆದರೆ ಎಲ್ಲವೂ ಮಣ್ಣು ಕೊರೆತವನ್ನು ನಿಲ್ಲಿಸಲು ಅತ್ಯಂತ ಉಪಕಾರಿಗಳಾಗಿವೆ.

ಟೆನಸಿ ಪ್ರದೇಶದ ಖನಿಜಸಂಪತ್ತಿನ ಶೋಧ ಇನ್ನೂ ನಡೆಯಬೇಕಾಗಿದೆ. ಒಟ್ಟು ಐವತ್ತು ಬಗೆಯ ಖನಿಜಗಳಿರಬಹುದೆಂದು ತಜ್ಞರು ತೀರ್ಪುಕೊಟ್ಟಿದ್ದಾರೆ. ಕವೊಲಿನ್ ಎಂಬ ಆವೆಮಣ್ಣಿನಿಂದ ಉತ್ತಮವಾದ ಪಿಂಗಾಣಿಯನ್ನು ತಯಾರಿಸಬಹುದು. ಕಡಮೆತರಗತಿಯದಾದರೂ ಒಂದು ಬಗೆಯ ಮೆಂಗನೀಸ ಸಿಗುತ್ತದೆ.

ಖನಿಜಸಂಪತ್ತೇನು, ಸಸ್ಯಸಂಪತ್ತೇನು, ಪಶುಸಂಪತ್ತೇನು ಎಲ್ಲವೂ ಮಣ್ಣಿನ ಅಭಿವೃದ್ಧಿಯ ಮೇಲೆ ಹೊಂದಿಕೊಂಡು, ಮಣ್ಣಿನ ಅಭಿವೃದ್ಧಿಗೆ ನೆರವಾಗುತ್ತಿದೆ. ಟೆನಸಿ ಕಂದರದ ಸರ್ವತೋಮುಖವಾದ ಸುಧಾರಣೆಯ ಕಾರ್ಯ ಪರಿಪೂರ್ಣವಾದಾಗ ಇದರಲ್ಲಿ ಮಣ್ಣಿನ ಮಾಯೆ ಎಷ್ಟು ಮಹತ್ತ್ವದ್ದೆಂಬ ಅರಿವಾಗಬಹುದು.

---

**ಫೋಟೋ ಮತ್ತು ನಕ್ಷೆಗಳು-**

| | | |
|---|---|---|
| ೧. ಸುಪರ್ ಫೋಸ್‌ಫೇಟ - | ಪುಟ ೪೩ | Food at the grass Reot. |
| ೨. ಫೋಸ್‌ಫೇಟ್ ವಲಯಗಳು - | ಪುಟ 36 | — do — |
| ೩. ನೀರುಕೊರೆತ (೧) | ಪುಟ 17 | Soil the Nation's Basic heritage- |
| “ (೨) | ಪುಟ 19 | |
| ೪. ಪ್ರಕೃತಿಯ ರಕ್ಷಣೆ. | ಪುಟ 56-57 | — do — |
| ೫. ಪ್ರಕೃತಿ ಚಕ್ರ. | ಪುಟ 58 | — do — |

## ಅಧ್ಯಾಯ ಐದು

## ಡಾಲರು, ಸೆಂಟ್ಸ್‌ಗಳಲ್ಲಿ ಜನಕ್ಕಾದ ಲಾಭ.

ಟೆನಸಿ ಕಂದರದ ಮತ್ತು ಇಡಿ ದೇಶದ ಜನಕ್ಕೆ ಟೀವೀಏ ಎಷ್ಟು ಲಾಭಾಂಶವನ್ನು ದೊರಕಿಸಿದೆ ಎಂಬುದರ ಲೆಕ್ಕಾಚಾರ ತುಂಬಾ ಆಶಾದಾಯಕವಾಗಿದೆ. ಟೆನಸಿ ಕಂದರದ ನಾಡವರು ದುಡಿಯುವ ಮಂದಿಯಾದರೆ ಅದರ ಹೊರಗಿನ ಜನಕ್ಕೆ ತಮ್ಮ ಬಂಡವಲಿನ ಸ್ವಾರ್ಥವಿದೆ. ಈ ಇಬ್ಬರಿಗೂ ಯಾವ ಬಗೆಯ ಲಾಭಾಂಶ ದೊರೆಯುತ್ತಿದೆ ಎಂಬುದು ವಿಚಾರಣೀಯವಾದ ಅಂಶವಷ್ಟು?

ಮೊದಲನೆಯದಾಗಿ ಟೆನಸಿ ಪ್ರದೇಶದ ಜನರ ವಾರ್ಷಿಕ ಆದಾಯ ಅಧಿಕವಾಗಿರುವುದು ಸ್ಪಷ್ಟವಾಗಿ ತೋರಿಬರುತ್ತಿದೆ. ದ್ವಿತೀಯ ಮಹಾಯುದ್ಧದ ಏರಿಕೆಯ ಪರಿಣಾಮ ತಲೆದೋರುವುದಕ್ಕೆ ಮುನ್ನವೇ ಕಂದರದ ಜನರ ತಲಾ ಒಂದರ ಆದಾಯ ನೂರಕ್ಕೆ ೭೩ರಷ್ಟು ಏರಿರುವುದನ್ನು ಇಡಿ ದೇಶದ ನೂರಕ್ಕೆ ೫೬ರೊಡನೆ ಹೋಲಿಸಿದರೆ ಮೂಡುವ ವ್ಯತ್ಯಾಸಕ್ಕೆ ಟೀವೀಏ ಕಾರಣವೆಂದು ಬೇರೆ ಸೂಚಿಸಬೇಕೆ? ಹೀಗೆ ಅಂಕೆ ಸಂಖ್ಯೆಗಳ ದೃಷ್ಟಿಯಿಂದಲೂ, ಭವಿಷ್ಯದ ಸುಳಿವಿನ ಮೇಲಿಂದಲೂ ಟೆನಸಿಯ ಜನದ ವಾರ್ಷಿಕೋತ್ಪನ್ನ ಮೇಲ್ಮುಖವಾಗಿ ನಡೆದಿದೆ ಎಂದು ಧಾರಾಳವಾಗಿ ಒಪ್ಪಿಕೊಳ್ಳಬಹುದಾದರೂ, ಟೆನಸಿ ಪ್ರದೇಶವು ಸಂ. ರಾಷ್ಟ್ರದಲ್ಲಿ ಇನ್ನೂ ಕಡಮೆ ಆದಾಯದ ವಲಯವೆಂಬುವನ್ನು ಮರೆಯುವಂತಿಲ್ಲ.

ಜನರ ವ್ಯವಹಾರದ ಮೇಲೆ ಟೀವೀಏ ಹೇಗೆ ಪರಿಣಾಮ ಬೀರಿದೆ? ಎನ್ನುವುದು ಮುಂದಿನ ಪ್ರಶ್ನೆ. ಟೆನಸಿ ಜನರ ಮುಖ್ಯ ಉದ್ದಿಮೆ ಎಂದರೆ ಬೇಸಾಯ ತಾನೆ. ಈ ಉದ್ದಿಮೆಯ ಉಜ್ವಲವಾದ ವರ್ತಮಾನ ಭವಿಷ್ಯಗಳನ್ನು ಹಿಂದಿನ ಪ್ರಕರಣದಲ್ಲಿ ವಿವರಿಸಿದೆ. ಈ ಅಧ್ಯಾಯದ ಮಟ್ಟಿಗೆ ಉದ್ದಿಮೆ ಎಂದರೆ ಕಚ್ಚಾಮಾಲನ್ನು ಪಯೋಗಿಸಿ ಸಂಸ್ಕೃತವಾದ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳು ಎಂದಿರಿಸಿಕೊಳ್ಳಬೇಕು. ಅಲ್ಯುಮಿನಿಯಮ್, ಫೆರ್ರೊಸಿಲಿಕನ್, ಮತ್ತೆ ರಾಸಾಯನಿಕ ಎಂಬ ಈ ಮೂರು ಕೈಗಾರಿಕೆಗಳು ಯುದ್ಧಕ್ಕೆ ಮೊದಲೇ ಅಲ್ಲಿ ಬೆಳೆದಿದ್ದುವು. ಇವುಗಳ ಪೈಕಿ

ದೇಶದಲ್ಲೇ ಅತಿದೊಡ್ಡ ಫೋಸ್ಫೇಟ ಕಾರ್ಖಾನೆಗಳೆರಡನ್ನು ಸೇರಿಸಿ ಕೊಳ್ಳತಕ್ಕದು.

ಫೋಸ್ಫೇಟ ತಯಾರಿಕೆಗೆ ಟೇವೀಏ ಈ ಹದಿನೈದು ವರುಷಗಳಲ್ಲಿ ನೆರವಾದ ವಿಧಾನವನ್ನು ಸೂಕ್ಷ್ಮವಾಗಿ ವಿವರಿಸುವುದಾದರೆ, ಕೃತಕಗೊಬ್ಬರು ಮತ್ತು ಸಿಡಿಮದ್ದಿನ ತಯಾರಿಯ ಕುರಿತು ಟೇವೀಏ ಸುಮಾರು ೨೦೦ ಶೋಧಗಳಲ್ಲಿ ಭಾಗವಹಿಸಿದೆ ಎನ್ನಬಹುದು. ಮಸಲ್‌ಶೋಲ್ಸ್‌ನಲ್ಲಿ ಉಪಯೋಗಿಸಲಾದ ವಿಧಾನಗಳಿಗೂ ವಸ್ತುಗಳಿಗೂ ೬೩ ಪೆಟೆಂಟುಗಳನ್ನು ಹೊಡೆಯಿಸಿ, ಆ ವಿಧಾನಗಳು ಯಾವ ಒಂದು ಸಂಸ್ಥೆಯ ಗುತ್ತಿಗೆಯಾಗದಂತೆ ಏರ್ಪಾಡು ನಡೆದಿದೆ. ಟೇವೀಏ ಪರಿಶೋಧನೆಯ ಕುರಿತು ಆಗಾಗ ಪತ್ರಿಕೆಗಳಲ್ಲಿ ಲೇಖನ ಬರುತ್ತಲೇ ಇರುವುದರಿಂದ ಸುಲಭದವಿಧಾನಗಳ ಪ್ರಚಾರವೂ ಸಸೂತ್ರನಾಗಿ ಜರಗುತ್ತಿದೆ. ೧೯೪೭ರಲ್ಲಿ ಖಾಸಗಿ ಉದ್ದಿಮೆದಾರರ 4೦೦ಜನ ಪ್ರತಿನಿಧಿಗಳು ಒಂದು ಮಸಲ್ ಶೋಲ್ಸನಲ್ಲಿರುವ ಟೇವೀಏ ಕಾರ್ಖಾನೆಯ ನವೀನ ಪದ್ಧತಿಗಳ ಪ್ರತ್ಯಕ್ಷ ಮಾಹಿತಿಯನ್ನು ಪಡೆದುಕೊಂಡುಹೋದರು.

ಹೊಸದಾಗಿ ಆರಂಭವಾದ ಚಿಕ್ಕಚಿಕ್ಕ ಕೈಗಾರಿಕೆಗಳು ಕೃತಕಗೊಬ್ಬರ ಮುಂತಾದ ಮಹೋದ್ಯಮಗಳಷ್ಟೇ ಮಹತ್ತ್ವದ್ದಾಗಿವೆ. ಈ ಹೊಸ ಕೈಗಾರಿಕೆಗಳನ್ನು ಆಹಾರ ಸಿದ್ಧಪಡಿಸುವ ವಿದ್ಯುತ್ ಯಂತ್ರಗಳಿಂದ ಹಿಡಿದು, ಜೆಣ್ಣೆತಯಾರಿ, ವಿಮಾನ, ಚಾಪೆ, ಸೀಸೆ ತೊಳೆಯುವ ಸಲಕರಣೆ, ಸ್ಟೋವ್, ನೀರಾಯಿಯ ಬಾಯಿ, ನೀರುಕಾಯಿಸುವ ವಿದ್ಯುತ್ ಉಪಕರಣ, ತಲೆಮರಿಗೆ, ಜೂಟು, ಪೆನ್ಸಿಲು, ದೋಣಿ, ಆಮ್ಲಜನಕ ಮತ್ತು ಎಸಿಟಲಿನ್‌ವರೆಗೂ ಲೆಕ್ಕಿಸಬೇಕು. ಆದರೂ ಪ್ರಗತಿಯ ಗುರಿಯನ್ನಿನ್ನೂ ಸಾಧಿಸಿದಂತಾಗಲಿಲ್ಲ. ಅತ್ತ ನೆಲದ ಸಾರ ರಕ್ಷಣೆಯೂ ಯಿತು, ಇತ್ತ ಕೈಗಾರಿಕೆಗಳೇಳುತ್ತಿವೆಯೆಂದು ಕೈಕಟ್ಟಿ ಕೂಡಲಾಗದು. ಇನ್ನೂ ಸಾಗಬೇಕಾದ ದಾರಿ ಬಹಳವಿದೆ: ೧೯೩೩ರಲ್ಲಿ ಟೇವೀಏ ಕೆಲಸ ಆರಂಭಿಸಿದಾಗ ೮||ಮಿಲಿಯ ಎಕರೆ ಜಮೀನಿನ ಪೈಕಿ ೭ಎಕರೆ ಪಾಳುಬೀಳುವುದರಲ್ಲಿತ್ತು. ಮೇಲು ಮಣ್ಣು ಸುಮಾರು ಒಂದುಮಿಲಿಯ ಎಕರೆ

ಯಷ್ಟೋ ನಾಶವಾಗಿ ಹೋಗಿತ್ತು. ಅವರ ಪೂರಣ ಇನ್ನೂ ಆಗಿಲ್ಲ. ಎಷ್ಟೋ ಮರಗಳನ್ನಿನ್ನೂ ಬೆಳೆಯಿಸಬೇಕು, ಮನೆಕಟ್ಟಬೇಕು, ಶಾಲೆ ರಸ್ತೆ ಆಸ್ಪತ್ರೆಗಳ ನಿರ್ಮಾಣವಾಗಬೇಕು, ಹೊಸ ಹೊಸ ಕೌಶಲ್ಯಗಳನ್ನು ಅಭ್ಯಾಸಮಾಡಬೇಕು. ಈ ಸಾಕುಬೇಕಿನ ಪಟ್ಟಿಯೊಂದೇ ಯಾವ ಪ್ರಯೋಜನಕ್ಕೂ ಬರಲಾರದು. ಆದರೂ ಈಗ ನಡೆಯುವುದೆಲ್ಲ ಆ ಚರಮೋದ್ದೇಶಕ್ಕೆ ಪೂರಕವಾಗಿಯೇ ನಡೆಯುತ್ತಿರುವುದು ತುಂಬಾ ಆನಂದದ ವಿಷಯ.

ಜನರ ಆಲೋಚನೆಯ ದಿಕ್ಕೇ ಬದಲಾಗಿರುವುದು ಇನ್ನೆಷ್ಟು ಮಹತ್ವದ ವಿಷಯವೆನಬೇಕು. ಹಿಂದೆ ಯಾವ ಕೆಲಸವಾಗಬೇಕಾದರೂ ಪ್ರಾಂತೀಯ ಸರಕಾರದ ಕಡೆಗೋ, ವಾಶಿಂಗಟನ್ ಕಡೆಗೋ ದೈನ್ಯದಿಂದ ನೋಡುತ್ತಿದ್ದ ಜನ ಇಂದು "ಏನು ಆ ಕೈಗಾರಿಕೆ ನಮ್ಮ ಟೆನಸಿಗೆ ಬರುವುದಿಲ್ಲವೆ? ಬರದೆಯೆ ಹೋಗಲೊಲ್ಲದೇಕೆ? ಇಲ್ಲಿಯೇ ನಾವದನ್ನು ಸೃಷ್ಟಿಸೋಣ." ಎಂದು ಸಾಹಸದಿಂದ ಮುನ್ನುಗ್ಗುತ್ತಿದ್ದಾರೆ. ಅಂದಿನ ಆ ದೈನ್ಯವೆಲ್ಲಿ? ಇಂದಿನ ಈ ಕೆಚ್ಚೆದೆಯ ಗಂಡಸುತನವೆಲ್ಲಿ?

ಈ ಎಲ್ಲ ಬದಲಾವಣೆಗೂ, ಎಲ್ಲ ಶ್ರೇಯಸ್ಸಿಗೂ ಟೀವೀಏ ಒಂದೇ ಕಾರಣವೆಂದು ನಾವು ಹೇಳಲಾರೆವು. ಟೀವೀಏ ತಾನು ಏಕೈಕ ವೀರನೆಂದು ಬಡಾಯಿಕೊಚ್ಚುವುದಿಲ್ಲ. ಹಾಗೆ ಕೊಚ್ಚಿದರೂ ಅದು ಅಕ್ಷರಶಃ "ಬಂಡ್ವಾಳವಿಲ್ಲದ ಬಡಾಯಿ" ಯಾದೀತು! (ಏಕೆಂದರೆ, ಹೆಚ್ಚಿನ ಬಂಡ್ವಾಳ ಟೀವೀಯೇಗೆ ಹೊರಗಿನಿಂದಲೇ ಬಂದುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು.) ಟೀವೀಏ ಒಂದು ಬಹುವೇಣೀಸಂಗಮ. ಅದರಲ್ಲಿ ಖಾಸಗೀ ಉದ್ದಿಮೆಯವರೂ ಸೇರಿದ್ದಾರೆ; ಪ್ರಾಂತ್ಯದ ಸರಕಾರಗಳೂ ಹೆಗಲುಕೊಟ್ಟಿವೆ; ರಾಷ್ಟ್ರೀಯ ಅಥವಾ ಫೆಡರಲ್ ಸರಕಾರವೂ ಪಾಲು ಹೊತ್ತಿದೆ; ಹೆಚ್ಚೇಕೆ, ಚಿಕ್ಕ ಚಿಕ್ಕ ನಗರಸಭೆ, ಸಮಾಜಗಳೂ, ಸಹಕಾರಿ ಸಂಘಗಳೂ ತಮ್ಮ ಅಳಿಲಸೇವೆಯನ್ನು ಸಲ್ಲಿಸಿದುದೂ ಉಂಟು. ಆದರೆ ಈ ಹಲವು ನೆರವಿಗರಲ್ಲಿ ಫೆಡರಲ್ ಸರಕಾರದ ಬಹುಮುಖವಾದ ಮತ್ತು ಅಗಣಿತ ಸಹಾಯಕ್ಕೆ ವಿಶೇಷ ರೀತಿಯ ಆಭಾರಮನ್ನಣೆ ಸಲ್ಲಬೇಕು.

ಟೀವೀಏಗೆ ವೆಚ್ಚವಾದ ಸಾರ್ವಜನಿಕ ಹಣದ ಲೆಕ್ಕಾಚಾರವು ಟೀವೀಏಯಿಂದ ಲಭಿಸುವ ಮಾನವೀಯ ಮತ್ತು ನೈತಿಕ ಗಣಿತಕ್ಕೆ ಮಿಗಿಲಾಗಲಾರದಾದರೂ, ಮುಂದೆ ಇಂಥ ಯೋಜನೆಗಳನ್ನು ತಮ್ಮ ದೇಶದಲ್ಲಿ ಸೃಷ್ಟಿಸಲು ಯತ್ನಿಸುವ ದೂರದರ್ಶಿಗಳಿಗೆ ಸಹಾಯವಾಗುವಂತೆ ಟೀವೀಏಗೆ ಎಷ್ಟು ಬಂಡವಲು ಬಿದ್ದಿದೆ? ಆ ಬಂಡವಲಿಗೆ ಡಾಲರ್ ಸೆಂಟುಗಳಲ್ಲಿ ಎಷ್ಟೆಷ್ಟು ಲಾಭಾಂಶ ದೊರಕಿದೆ? ಎಂಬುದನ್ನು ಪರಾಮರ್ಶಿಸಬೇಕು.

ಎರಡು ಮುಖ್ಯ ಅಪವಾದಗಳನ್ನು ಬಿಟ್ಟರೆ ಟೀವೀಏಗೆ ಮುಂಗಡವಾಗಿ ತೆತ್ತ ಹಣವನ್ನು ಕಾಂಗ್ರೆಸು ತನ್ನ ವಾರ್ಷಿಕ ಅಂದಾಜು ಪಟ್ಟಿಯಿಂದಲೇ ಕೊಟ್ಟಿರುತ್ತದೆ. ಟೀವೀಏಯ ೬೫ಮಿಲಿಯದ ಸಾಲಪತ್ರವೂ ವಿದ್ಯುತ್ ಗ್ರಾಹಕರು ಒಡ್ಡು ಹಾಕಲು ಸಾಲಕೊಟ್ಟ ೫೦ಮಿಲಿಯದ ದಾಖಲೆಯೂ, ಈ ಸಾಮಾನ್ಯ ನಿಯಮಕ್ಕೆ ಅಪವಾದಗಳು. ಇವನ್ನು ಬಿಟ್ಟರೂ ಟೀವೀಏ ಬಂಡವಲು ೭೦೦,೦೦೦,೦೦೦ಡಾಲರಿಗೂ ಮಿಗುತ್ತದೆ. ಇಷ್ಟುದೊಡ್ಡ ಬಂಡವಲಿಗೆ ಯಾವ ಬಗೆಯ ಲಾಭಾಂಶ ಸಿಕ್ಕೀತು? ಅಥವಾ ಸಿಗಬೇಕು? ಆದರೆ ಇಲ್ಲಿ ಗಮನಿಸಲೇ ಬೇಕಾದ ಮುಖ್ಯ ವಿಷಯವೇನೆಂದರೆ ಟೀವೀಏಯಿಂದ ಜನಕ್ಕೊದಗಿದ ಲಾಭವನ್ನು ನಿಷ್ಕೃಷ್ಟವಾಗಿ ಅಳೆಯುವುದು ಅಸಾಧ್ಯ. ವಿದ್ಯುತ್ ಸೌಕರ್ಯ ಒಂದುಮಾತ್ರ ಈ ರೀತಿ ನಮ್ಮ ಮಾನದಂಡಕ್ಕೆ ಒಳಗಾಗಬಹುದು. ಅಲ್ಲದೆ ಪ್ರವಾಸ ಸೌಕರ್ಯದ ಕಾಲುವೆಯನ್ನು ತೆಗೆದುಕೊಂಡರೆ ಅದರ ಲಾಭ ಮಾಲು ಕಳುಹಿಸುವ ಬೇಹಾರಿಗಳಿಗೂ, ಕೈಗಾರಿಕೆ-ಉದ್ಯಮಗಳಿಗೂ, ಆಹಾರ ಧಾನ್ಯಗಳನ್ನು ಸೇವಿಸುವ ಗ್ರಾಹಕರಿಗೂ ಉಂಟಾಗುವುದರಿಂದ, ಯಾರು ಯಾರಿಗೆ ಎಷ್ಟೆಷ್ಟೆಂದು ಗಣಿತ ಹಾಕುವುದಕ್ಕಾದೀತೆ? ಇನ್ನು ನೆರೆನಿಯಂತ್ರಣದ ಲಾಭವನ್ನು ಮಿಸಿಸಿಪಿಯಿಂದ ಹಿಡಿದು ಮೆಕ್ಸಿಕೋ ಕೊಲ್ಲಿಯವರೆಗಿನ ಎಲ್ಲ ಜನಕ್ಕೂ, ಸಂಸ್ಥೆಗಳಿಗೂ, ಹಂಚೋಣವೆ? ಹಾಗೆ ಹಂಚುವುದಾದರೆ ಯಾವ ಪ್ರಮಾಣದಲ್ಲಿ ಹಂಚೋಣ? ಟೀವೀಏ ಫೋಸ್‌ಫೇಟಿನ ಉಪಕಾರವನ್ನು ಟೆನಸಿ ಕಂದರದ ಹೊರಗಿನ ಜನರೂ ತಿಳಿದು ಎಚ್ಚತ್ತಿರುವುದರಿಂದ ಅವರಿಗೂ ಆದ ಲಾಭಾಂಶವನ್ನು ಗಣಿಸುವುದೆ? ಅಂದರೆ

ಒಟ್ಟು ಅರ್ಥ ಇಷ್ಟೇ. ಈ ಎಲ್ಲ ಬೆಳವಣಿಗೆಯ ವೆಚ್ಚವನ್ನು ಟೀವೀಏಯು ನಿವ್ವಳ ವೆಚ್ಚವೆಂದು ಟೀವೀಏ ಪುಸ್ತಕಗಳಲ್ಲಿ ಬರೆದಿಟ್ಟರೂ, ಲಾಭದ ಅಂಶವು ಇಡಿ ಸಂಯುಕ್ತರಾಷ್ಟ್ರದ ಖಾತೆಕಿರ್ದಿಯಲ್ಲಿ ಮೂಡಿಬಂದಿದೆ.

ನಿಷ್ಕೃಷ್ಟ ಲಾಭಾಂಶದ ಗೊತ್ತು ಹಚ್ಚಬೇಕಾದರೆ ಟೀವೀಏ ವಿದ್ಯುತ್ತಿಗೆ ಹಾಕಿದ ೪೫೦ಮಿಲಿಯ ಡಾಲರು ಬಂಡವಲಿನ ಇತಿಹಾಸವನ್ನವಲೋಕಿಸಬಹುದು. ೧೯೪೫ರಲ್ಲಿ ವಿದ್ಯುತ್ತಿನ ವ್ಯವಹಾರದಲ್ಲಿ ಒಟ್ಟು ವೆಚ್ಚಕ್ಕಿಂತ ಆದಾಯವು ೧೩ಮಿಲಿಯ ಡಾಲರಿನಷ್ಟು ಅಧಿಕವಾಗಿತ್ತು. ೧೯೩೩ರಿಂದ ೧೯೪೫ರ ವರೆಗಿನ ನಿವ್ವಳ ಆದಾಯವು ೪೦ ಮಿಲಿಯ ಡಾಲರಾಗಬಹುದು. ಇದರಲ್ಲಿ ೧೯೩೩ರಿಂದ ೩೭, ನಷ್ಟದಲ್ಲೇ ನಡೆದ ವರ್ಷಗಳಾದುದರಿಂದ ಈ ಲಾಭವೆಲ್ಲ ಬರಿಯ ಐದಾರು ವರ್ಷಗಳಲ್ಲಿ ಶೇಖರಿಸಿದ್ದೆಂದು ಭಾವಿಸಬಹುದು. ಈ ನಿವ್ವಳ ಆದಾಯದ ಜತೆಗೆ ಅಪ್ರತ್ಯಕ್ಷವಾದ ಮತ್ತು ಗಣನೆಗೆ ಸಿಲುಕದ ಅಂಶಗಳೆಷ್ಟೋ ಇವೆ: (೧) ದರಇಳಿಸಿದುದರಿಂದಾದ ೧೦ಮಿಲಿಯ ಡಾಲರು ಮಿತವ್ಯಯ. (೨) ಕಡಮೆ ದರದಿಂದ ಕಂದರದ ಉದ್ಯಮಗಳ ಮೇಲಾದ ಸುಪರಿಣಾಮ. (೩) ರಾಷ್ಟ್ರದ ಇತರ ಪ್ರದೇಶಗಳಿಗುಂಟಾದ ಲಾಭದಲ್ಲಿ ಟೀವೀಏ ತನಗೆ ಬೇಕಾದ ಯಂತ್ರಸಾಮಗ್ರಿಗಳ ಪೈಕಿ ನೂರಕ್ಕೆ ೮೦ರಷ್ಟನ್ನು ಟೆನಸಿಯ ಹೊರಗಿನ ಪ್ರದೇಶಗಳಿಂದ ಆಮದು ಮಾಡಿಕೊಂಡದ್ದನ್ನೆಣಿಸಬೇಕು- (೪) ಯುದ್ಧಕಾಲದಲ್ಲಿ ಜರ್ಮನಿಯ ಮೇಲೆ ಬಾಂಬು ಕಾರುವುದು ಸುಲಭವಾದುದು.

ಈ ಆದಾಯವು ಇದೇ ದಾಮಾಶಯದಲ್ಲಿ ಉಳಿಯುವುದಾದರೆ ಯೋಜನೆ ಆರಂಭವಾದ ಮೂವತ್ತು ವರ್ಷಗಳೊಳಗೆ ಬಂಡವಲಿನ ಸಲುವಳಿ ಸಂಪೂರ್ಣವಾಗಲಡ್ಡಿಯಿಲ್ಲ. ಬಂಡವಲಿನ ಹೆಚ್ಚಿನ ಭಾಗ ದೀರ್ಘಾಯುಷ್ಯದ ಭೂಮಿ ಮತ್ತು ಇತರ ಸ್ಥಿರಸೊತ್ತುಗಳ ಮೇಲೆ ಇರುವುದರಿಂದ ಮೂವತ್ತು ವರ್ಷ ದೀರ್ಘಕಾಲವೇನೂ ಅಲ್ಲ; ಬರಿಯ ವಿದ್ಯುತ್ ಪೂರೈಕೆಯೊಂದೇ ಏಕೆ, ಅದರೊಡನೆ ನೌಕಾಯಾನ ಮತ್ತು ನೆರೆನಿಯಂತ್ರಣಕ್ಕೆ ತುಂಬಿಸಿದ ಬಂಡವಲನ್ನು—ಅಂದರೆ ಒಟ್ಟು ೭೦೦ಮಿಲಿಯ ಡಾಲರು ನಿಧಿಯನ್ನು—ಸೇರಿಸಿಕೊಂಡರೂ ವಿದ್ಯುತ್ತಿನಿಂದ ಬರುವ ಆದಾಯವೊಂದರಿಂ

ದಲ್ಲೇ ಬಂಡವಲಿನ ಸಂಪೂರ್ಣ ಮೊತ್ತವನ್ನು ಹಿಂದೆಕೊಡಬಹುದಾಗುತ್ತದೆ.

ಎರಡನೆಯದಾಗಿ, ಜಲಸಂಚಾರಕ್ಕೆ ಮೀಸಲಾಗಿಟ್ಟ ಹತ್ತು ಮಿಲಿಯ ಡಾಲರಿಗೆ ಯಾವ ಗತಿಯಾಗಿರುವುದೆನ್ನುವುದನ್ನು ನೋಡೋಣ. ಎಲ್ಲ ಲಾಭವನ್ನು ಡಾಲರ್ ಸೆಂಟುಗಳಲ್ಲಿ ಅಳೆಯಲಾರೆವೆಂಬುದನ್ನು ಇಲ್ಲಿಯೂ ನೆನಪಿನಲ್ಲಿರಿಸಿಕೊಂಡರೆ ಈ ಕೆಳಗಿನ ಅಪ್ಪಟ ಲಾಭವನ್ನು ಗುರುತಿಸಬಹುದು: (೧) ಮಾಲು ಕಳಿಸುವ ಬೇಹಾರಿಗಳಿಗೆ ಈಗಾಗಲೇ ವರ್ಷಕ್ಕೆ ೩॥ಮಿಲಿಯ ಡಾಲರ್ ಉಳಿಯುತ್ತದೆ. ಇದು ಕೆಲಗಾಲ ಹೋದ ಮೇಲೆ ೮ಮಿಲಿಯದಷ್ಟಾಗುವ ಸಂಭವವುಂಟು. (೨) ಒಂದೇ ಒಂದು ವರ್ಷದ ನೆರೆಹಾವಳಿ ನಿಂತರೆ ಉಂಟಾಗುವ ಉಳಿತಾಯ ಒಂದು ಮಿಲಿಯ ಡಾಲರು. (೩) ಖಾಸಗಿ ಉದ್ದಿಮೆಗಳಿಗೆ ಇದರಿಂದ ದೊರೆತ ಸ್ಫೂರ್ತಿ ಅನೇಕಾನೇಕ ಚಿಕ್ಕ ದೊಡ್ಡ ಹೊಸ ಕೈಗಾರಿಕೆಗಳ ಸ್ಥಾಪನೆಯಲ್ಲಿ ಗೋಚರಕ್ಕೆ ಬರುತ್ತಿದೆ.

ಮೂರನೆಯದಾಗಿ, ಮಣ್ಣಿನ ಪುನರ್‌ರಚನೆಗೆ ಖರ್ಚಾದ ೩,೩೪೪,೦೦೦ಡಾಲರಿನ ಲೆಕ್ಕಕ್ಕೆ ಅಂಕಗಣಿತದ ಯಾವ ಸಾಕ್ಷಿಯೂ ಸಿಗಲಾರದು. ಆದರೆ (೧) ಟೆನಸಿ ಪ್ರದೇಶದ ಸಾರೈಶ್ವರ್ಯವನ್ನೂ (೨) ಸರ್ವರಾಷ್ಟ್ರದ ಶಕ್ತಿಸಂಪತ್ತನ್ನೂ ಮತ್ತು (೩) ಸಾವಿರಾರು ಜನಕ್ಕೆ ಯೋಜನೆ ಒದಗಿಸಿಕೊಟ್ಟ ಅಭೂತಪೂರ್ವವಾದ ಸಂದರ್ಭ, ಸದವಕಾಶವನ್ನೂ ಆಳವಾಗಿ ಗಮನಿಸಬೇಕು. ಹಾಗೆ ಗಮನಿಸಿದ್ದೇ ಆದರೆ, ಮಣ್ಣಿಗೆ ಹಾಕಿದ ಹೊನ್ನು ಮಣ್ಣಾಗದೆ. ಆ ಮಣ್ಣೆಲ್ಲವೂ ಹೊನ್ನಾಗಿ ಮಣ್ಣಿನ ಮಕ್ಕಳ ಬಾಳುವೆಯನ್ನೆಲ್ಲ ಅಪರಂಜಿಯಾಗಿ ಪರಿವರ್ತಿಸಿದುದು ಕಾಣುವುದಿಲ್ಲವೆ?

---

## ಅಧ್ಯಾಯ ಆರು.

## ನಿಸರ್ಗದಲ್ಲಿ ಐಕ್ಯ.

ನಿಸರ್ಗದ ಕಣ್ಣೆದಿರು ಎಲ್ಲ ವಸ್ತುಗಳಿಗೂ ಒಂದು ಏಕರೂಪತೆಯೂ, ಒಂದು ಬಗೆಯ ಐಕ್ಯವೂ ಸಾಧಿಸುವುದೆಂದು ಈ ಮೊದಲೇ ಸೂಚಿಸಿದ್ದೇವೆ. ಜೀವನವನ್ನು ಖಂಡ ಖಂಡವಾಗಿ ನೋಡುವ ಹವ್ಯಾಸ ತಪ್ಪುದಾರಿ ಹಿಡಿದ ಮನುಷ್ಯನಿಗೆ ಬಿಟ್ಟದ್ದು. ಜೀವನದ ಸಮಗ್ರತೆಯನ್ನೂ, ಜೀವ ಜೀವಾಳದ ಐಕ್ಯವನ್ನೂ ಅರಿತುಕೊಂಡ ಮನುಷ್ಯ ಹೇಗೆ ದ್ರಷ್ಟಾರನೆನಿಸುತ್ತಾನೋ, ಅಂತೆಯೇ ನಿಸರ್ಗಸಹಜವಾದ ಐಕ್ಯವನ್ನರಿತು, ಅದರ ಐಕ್ಯ ನಿಯಮವನ್ನು ಪರಿಪಾಲಿಸುವ ಜನ ಪ್ರಗತಿಯ ಹಾದಿ ತುಳಿಯುತ್ತಾರೆ. ಜೀವನದ ಒಂದೊಂದು ಭಾಗವೂ ಒಂದರೊಡನೊಂದು ಹಾಸುಹೊಕ್ಕಾಗಿ ಬೆಳೆದು ಅಖಂಡವಾದ ಜೀವನ ಸತ್ತ್ವವಾಗುತ್ತದೆ. ನೆಲ, ಜಲ, ಅರಣ್ಯ, ಖನಿಜ, ಕೃಷಿ, ಉದ್ಯೋಗ, ಜನ ಎಲ್ಲ ಒಂದೆ ಸೂತ್ರದಿಂದ ಕೋದ ಹಲವು ಮಣಿಗಳು. ಐಕ್ಯವೇ ಆ ಸೂತ್ರ.

ಟೇವೀಏ ಸ್ಥಾಪಿತವಾಗುವ ಹದಿನೈದು ವರ್ಷಗಳ ಮುಂಚಿನಿಂದಲೂ ಟೇವೀಏ ಪ್ರದೇಶದ ಜಲವಿದ್ಯುತ್ ಯೋಜನೆಗಳ ಕುರಿತು ಚರ್ಚೆ ನಡೆಯುತ್ತಿತ್ತು. ಅಲಬಾಮಾ ಪ್ರಾಂತ್ಯದ ಮುಸಲ್ ಶೋಲ್ಸಿನಲ್ಲಿ ಈಗಾಗಲೇ ಒಂದು ಜಲವಿದ್ಯುತ್ ಕೇಂದ್ರದ ಸ್ಥಾಪನೆಯಾಗಿತ್ತು. ಟೇವೀಏ ಪ್ರದೇಶದಲ್ಲಿ ಎಲ್ಲೆಲ್ಲಿಯೂ ಅಂತಹ ವಿದ್ಯುತ್ ತಯಾರಿಕೆಯ ಕೇಂದ್ರಗಳನ್ನು ಸೃಷ್ಟಿಸಬೇಕೆಂಬ ಏಕೋದ್ದೇಶದ ವಿಚಾರಗಳೇ ಆಗ ಅಲ್ಲಲ್ಲಿ ಕೇಳಿಬರುತ್ತಿದ್ದುವು. ಹೀಗೆ ಎಲ್ಲ ಜನರ ದೃಷ್ಟಿಯೂ ಮಿಂಚಿನ ಮಾಯೆಗೆ ಸಿಲುಕಿದ್ದ ಹೊತ್ತು ದೂರದರ್ಶಿಯಾದ ರೂಸ್‌ವೆಲ್ಟ್ ಮಹಾಶಯನು ಹೇಳಿದ ಮುತ್ತಿನ ಮಾತುಗಳ ಕಡೆಗೆ ಕಿವಿಗೊಡೋಣವೆ? ೧೯೩೩ರಲ್ಲಿ ಆತ ಕಾಂಗ್ರೆಸ್ಸಿಗೆ ಕಳುಹಿಸಿದ ಸಂದೇಶದಲ್ಲಿ ಈ ಮುಖ್ಯವಾದ ವಿಚಾರಗಳಿದ್ದುವು:

"ಮಸಲ್‌ಶೋಲ್ಸಿನ ಅಭಿವೃದ್ಧಿ ಇಡಿ ಟೆನಸಿ ನದಿಯ ಸರ್ವತೋಮುಖ ಅಭಿವೃದ್ಧಿಯ ಒಂದು ಕಿರಿಯ ಅಂಶ ಮಾತ್ರ. ನದಿಯ ಪ್ರಯೋಜನವನ್ನು ಸಮಗ್ರವಾಗಿ ಅವಲೋಕಿಸಿದರೆ ಜಲವಿದ್ಯುತ್ ತಯಾರಿಕೆಯೊಂದರಿಂದಲೇ ನಮ್ಮ ಆಕಾಂಕ್ಷೆ ಈಡೇರದು. ಯುದ್ಧಕಾಲ (ಪ್ರಥಮ ಮಹಾಯುದ್ಧ)ದ ಏಕಮುಖವಾದ ಯೋಜನೆ ನಿಸರ್ಗದ ಎಲ್ಲ ತತ್ತ್ವಗಳನ್ನೂ, ಮಿಲಿಯಾಂತರ ಜನರ ನಿತ್ಯಜೀವನವನ್ನೂ ಒಳಗೊಂಡ ಒಂದು ಮಹಾ ಯೋಜನೆಯಾಗಿ ರೂಪುಗೊಳ್ಳಬೇಕು. ಅಂದರೇನೇ ಪ್ರಾದೇಶಿಕ ಜನಜೀವನಕ್ಕೆ ಸ್ಫೂರ್ತಿ ಬಂದೀತು.............ಈ ಉದ್ದೇಶಕ್ಕಾಗಿ ಖಾಸಗೀ ಉದ್ದಿಮೆಗಳಲ್ಲಿರುವ ಉತ್ಸಾಹವೂ, ಮೃದುತೆಯೂ, ಸರಕಾರಿ ಸಂಸ್ಥೆಯೊಂದಕ್ಕಿರುವ ಅಧಿಕಾರವೂ, ಜತೆಯಾಗಿ ಉಳ್ಳಂತಹ ಟೆನಸಿಕಂದರದ ಆಡಳಿತ–ಟೀವೀಏ–ಎಂಬುದನ್ನು ಸ್ಥಾಪಿಸಬೇಕೆಂದು ನಾನು ಸೂಚಿಸುತ್ತೇನೆ.............ಯೋಜನಾ ಪದ್ಧತಿಯನ್ನನುಸರಿಸಿ ಎಷ್ಟೋ ರಾಷ್ಟ್ರಗಳು ಅಭ್ಯುದಯ ಪಡೆದಿವೆ. ಆದರೆ ನಮ್ಮ ರಾಷ್ಟ್ರ ಯೋಜನಾ ರಾಹಿತ್ಯದಿಂದ ಈ ವರೆಗೆ ಪಟ್ಟ ಬವಣೆ ಇನ್ನು ಸಾಕು. ನಮ್ಮ ಮುಖ್ಯವಾದ ನದಿಯೊಂದರಿಂದ ಆರಂಭವಾಗುವ ಈ ಯೋಜನೆಯ ವ್ಯವಸ್ಥೆ ವಿಶಾಲವಾಗಿ ಹರಡಲಿ."

ಹತ್ತೆಂಟು ಪ್ರಕೃತಿಯ ಶಕ್ತಿಗಳನ್ನೂ, ಹತ್ತೆಂಟು ಪ್ರಾಂತ್ಯಗಳನ್ನೂ, ಒಂದಾಗಿ ಮಾಡಿ ಮುಂಬರಿಯುವ ಟೆನಸಿ ಕಂದರದ ಈ ಪ್ರಸಿದ್ಧ ಯೋಜನೆ ಭಗವಂತನು ಒಂದಾಗಿ ಸೃಷ್ಟಿಸಿದುದನ್ನು ಒಂದಾಗಿಯೇ ಪರಿಗಣಿಸಿ ಬೆಳೆಯಿಸಬೇಕೆಂಬ ಸಿದ್ಧಾಂತಕ್ಕೆ ಉತ್ತಮವಾದ ನಿದರ್ಶನವಾಗಿದೆ. ಉಪದ್ರವಕಾರಿಯಾದ ನದಿಯನ್ನು ಪಳಗಿಸುವುದರಿಂದ ಹಲವಾರು ಬಗೆಯ ಲಾಭಗಳುಂಟು: ನದಿ ಮೀನು ಹಿಡಿಯಲು ಯೋಗ್ಯವಾಗುವುದು, ಜಲಸಂಚಾರಕ್ಕೆ ಅನುವಾಗುವುದು, ನೆರೆಹಾವಳಿ ನಿಲ್ಲುವುದು. ಬೆಳೆ ಅಧಿಕವಾಗುವುದು, ಜನಜೀವನ ಸಮುನ್ನತವಾಗುವುದು– ಇವೆಲ್ಲ ಒಂದೆ ಸೂತ್ರದ ಹಲವು ಎಳೆಗಳು. ಇವನ್ನೆಲ್ಲ ಒಂದಾಗಿ ಅಭಿವೃದ್ಧಿಗೆ ತರುವ ಹೊಣೆಯನ್ನು ಟೀವೀಏ ವಹಿಸಿಕೊಂಡಿತು.

ಕಾಂಗ್ರೆಸು ಟೇವೀಏಯನ್ನು ಸ್ಥಾಪಿಸಿ ತನ್ನ ಭೂತಕಾಲದ ಏಕ ಮುಖವಾದ ಧೋರಣೆಯನ್ನು ಒಮ್ಮೆಗೆ ಮುರಿಯಿತು. ಸಂಯುಕ್ತ ರಾಷ್ಟ್ರದಲ್ಲಿ ಒಡ್ಡು ಹಾಕುವುದೊಂದು ಹೊಸ ಕಾರ್ಯಕ್ರಮವೇನೂ ಆಗಿರ ಲಿಲ್ಲ. ಆದರೆ ಈ ವರೆಗಿನ ಒಡ್ಡುಗಳಿಗೆಲ್ಲ ಒಂದೊಂದೇ ಉದ್ದೇಶ, ಒಂದೊಂದೇ ಉಪಯೋಗ. ಇತರ ಉಪಯೋಗಗಳಿದ್ದರೂ ಅವು ಗೌಣ, ಅಥವಾ ಹೆಚ್ಚುಪಾಲು ನಗಣ್ಯ. ಇಂತಹ ಧೋರಣೆಯಿಂದ ತುಂಬಾ ಕೆಡುಕುಂಟು: (೧) ಏಕೋದ್ದೇಶದ ಯೋಜನೆಗಳಿಂದ ಕ್ಷಿಪ್ರವಾದ ಲಾಭ ಪಡೆಯುವ ಪ್ರವೃತ್ತಿಯಿಂದಾಗಿ ನದಿಯ ಇತರ ಪ್ರಯೋಜನಕರವಾದ ಶಕ್ತಿ ವಿಶೇಷಗಳು ಕುಂಠಿತವಾಗುವುವು. (೨) ಜಲಸಂಚಾರ ಸೌಕರ್ಯ ವನ್ನು ಕಲ್ಪಿಸುವುದಕ್ಕಾಗಿ ಎಷ್ಟೋ ನದಿಗಳಿಗೆ ಮಿಲಿಯಾಂತರ ಡಾಲರು ಸುರುವಿದ್ದರೂ, ಈ ಅಣೆಕಟ್ಟುಗಳಿಂದ ನೆರೆಹಾವಳಿ ತಪ್ಪುವಂತಿಲ್ಲ. ಭಿನ್ನೋದ್ದೇಶಕ ಯೋಜನೆಗಳ ರಚನೆಗೆ ಈ ಒಂದೇ ಉದ್ದೇಶದ ಯೋಜ ನೆಗಳು ಆತಂಕಪ್ರಾಯವಾಗಿವೆ ಎಂದು ಬೇರೆ ಹೇಳಬೇಕಾಗಿಲ್ಲ. (೩) ನೆಲದ ಮೇಲುಮಣ್ಣು ಮಳೆಯ ನೇರವಾದ ಹೊಡೆತಕ್ಕೆ ಸಿಕ್ಕಿದರೆ ಅದ ರೊಳಗಿನ ಸತ್ವವೆಲ್ಲ ನೀರುಪಾಲಾಗಿ ನಷ್ಟವಾಗುವ ವಿಚಾರ ಮೊದಲೇ ಹೇಳಿರುವೆವು.

ಒಮ್ಮೊಗ ಧೋರಣೆಯ ಹಾವಳಿಯನ್ನು ಟೆನಸಿ ಕಂದರದ ಡಕ್ ಟೌನ ಪಟ್ಟಣದ ನಿದರ್ಶನದಿಂದ ವಿವರಿಸಬಹುದು. ಹತ್ತಿಪ್ಪತ್ತು ವರ್ಷ ಗಳ ಹಿಂದೆ ಡಕ್‌ಟೌನಿಗೆ ಕೈಗಾರಿಕೆಗಳು ಬಂದ ಕತೆ ಇದು. ಡಕ್‌ಟೌನಿ ನಲ್ಲಿ ತಾಮ್ರದ ಅದುರು ಸಿಕ್ಕಿತು, ಅದನ್ನಗೆಯಲಾರಂಭವಾಯಿತು, ತಾಮ್ರದ ಕಾರ್ಖಾನೆಯೊಂದು ಕೆಲಸಕ್ಕನುವಾಯಿತು. ಸರಿ, ಟೆನಸಿ ಪ್ರದೇಶದ ಸಾಧನಸಂಪತ್ತಿನಲ್ಲಿ ಒಂದಾದರೂ ಅಭಿವೃದ್ಧಿಗೊಳ್ಳುವುದೆಂದರೆ ಸಂತೋಷಪಡಬೇಕುತಾನೆ? ಅದರಿಂದ ಎಷ್ಟೋ ಜನಕ್ಕೆ ಹೊಸ ಉದ್ಯೋಗ, ಹೊಸ ಆದಾಯ ಸಿಗುವುದು ಸಹಜವೆ. ಆದರೂ ಡಕ್ ಟೌನಿನ ತಾಮ್ರಾಧೀಶರ ಕಣ್ಣಿಗೆ ಕಂಡುದು ತಾಮ್ರ ಒಂದೇ ಆದುದರಿಂದ ಅವರ ಕಣ್ಣು ಇತರ ವಿಷಯಗಳ ಮಟ್ಟಿಗೆ ಕುರುಡಾಯಿತು. ಡಕ್‌ಟೌನಿಗೆ ಏಳುಮೈಲು ದೂರದ ಹೆಮ್ಮರಗಳ ಅರಣ್ಯದ ಸೌದೆಯನ್ನು ಕಡಿಕಡಿದು

ತಾಮ್ರದ ಒಲೆಗೆ ಬೆಂಕಿಕೊಟ್ಟರು. ಕೆಲವೇ ವರ್ಷಗಳಲ್ಲಿ ಅರಣ್ಯದ ಗುರುತು ಹಚ್ಚುವುದೂ ಕಷ್ಟವಾಯಿತು. ಸಾಲದ್ದಕ್ಕೆ ಕಾರ್ಖಾನೆಯಿಂದ ಹೊರಟ ಗಂಧಕದ ಹೊಗೆಯಿಂದಾಗಿ ಸಮಸ್ತ ಪ್ರದೇಶವೂ ವಿಷಮಯವಾಯಿತು. ಅಲ್ಲೀಗ ಯಾವ ಸಸ್ಯವೂ ಬೆಳೆಯುವಂತಿಲ್ಲ; ಯಾವ ಪ್ರಾಣಿಯೂ ಬದುಕುವಂತಿಲ್ಲ.

ನಿರ್ಜೀವವಾದ ನೆಲದ ಮೇಲೆ ದಾರುಣವಾದ ಮಳೆ ಅತ್ಯಾಚಾರ ನಡೆಸಿತು. ಶಸ್ಯಶ್ಯಾಮಲವಾದ ಭೂಮಿಯಲ್ಲಿ ಅಲ್ಲಲ್ಲಿ ಆಳವಾದ ತೋಡುಗಳುದ್ಭವಿಸಿದವು. ಹೊದಿಕೆಯಿಲ್ಲದ ನೆಲದ ಮೇಲೆ ನೀರು ನಿಲ್ಲಲಾರದೆ ಭರಭರನೆ ಹರಿದು ಹಳ್ಳಕೊಳ್ಳಗಳನ್ನು ಸೇರಿದಾಗ ತನ್ನೊಡನೆ ಒಯ್ದ ಕೆಸರುಮಣ್ಣನ್ನು ಆ ಹಳ್ಳಕೊಳ್ಳಗಳಿಗೆ ಸೇರಿಸಿ, ಅಲ್ಲಿನ ಮೀನು ವ್ಯವಸಾಯವನ್ನು ಕತ್ತು ಹಿಚುಕಿ ಕೊಂದಿತು. ನದಿಯ ಇನ್ನೂ ಕೆಳವಲಯದಲ್ಲಿನ ಒಂದು ಖಾಸಗಿ ವಿದ್ಯುತ್ ಸಂಸ್ಥೆಯ ಜಲಾಶಯವು ಕೆಸರುಮಣ್ಣಿನ ಬವಣೆಗೀಡಾಯಿತು. ಡಕ್‌ಟೌನಿನಲ್ಲಿ ತಾಮ್ರ ತಯಾರಾಯಿತು, ನಿಜ; ಆದರೆ ಈ ತಯಾರಿಯ ನಡುವೆ ಸುತ್ತಲಿನ ಜನಜೀವನಕ್ಕೆ ಮಹಾಹಾನಿ ಸಂಭವಿಸಿತು.

ಇಂಥ ಸಂದಿಗ್ಧ ಸನ್ನಿವೇಶದಲ್ಲಿ ಡಕ್‌ಟೌನಿಗೆ ಟೀವೀಏ ಬಂದು ಇಡಿಯ ಪ್ರದೇಶದ ಭಾಗ್ಯೋದಯವಾಯಿತು. ತಾಮ್ರದ ಕಾರ್ಖಾನೆಯಲ್ಲಿ ಒಂದು ಹೊಸ ವಿಧಾನದ ಉಪಯೋಗದಿಂದ ಈಗ ಗಂಧಕದ ಹೊಗೆ ಹೊರಡುವುದಿಲ್ಲ. ಬದಲು ತಾಮ್ರಕ್ಕೂ ಹೆಚ್ಚು ಬೆಲೆಬಾಳುವ ಒಂದು ಉಪವಸ್ತು ಉತ್ಪನ್ನವಾಗುತ್ತಿದೆ. ತಾಮ್ರಾಧೀಶರು ಟೀವೀಏಯ ಬಲಗೈಯಾಗಿ ನಿಂತಿದ್ದಾರೆ. ಉತ್ಸಾಹದಿಂದ ಮರಳಿ ಕಾಡುನೆಡುವ ಉದ್ಯೋಗದಲ್ಲಿ ಅವರು ಸಂಪೂರ್ಣ ಸಹಕಾರ ಕೊಡುತ್ತಿದ್ದಾರೆ. ಹೀಗೆ ಟೀವೀಏಯ ಮಹೋದ್ದೇಶವೂ ಸಫಲವಾಗುತ್ತಿದೆ; ತಾಮ್ರಾಧೀಶರ ಸ್ವಾರ್ಥವೂ ಸಾಧಿಸುತ್ತಿದೆ.

ಡಕ್‌ಟೌನಿನಂಥ ಪ್ರದೇಶಗಳು ಸಂಯುಕ್ತರಾಷ್ಟ್ರದಲ್ಲಿ ಇನ್ನೂ ಎಷ್ಟೋ ಇವೆ. ಹೊರಗಿನ ಟೆನಸಿ ಪ್ರದೇಶದ ಮಿಚಿಗನ್ ಮತ್ತು

ವಿಸ್ಕೊನ್‌ಸಿನ್ ಪ್ರಾಂತ್ಯಗಳಲ್ಲಿ ಜನವಿರಹಿತವಾದ ಎಷ್ಟೋ ಪೇಟೆ ಪಟ್ಟಣಗಳನ್ನು ಈಗಲೂ ಕಾಣಬಹುದು. ಮರಸಿಗಿಯುವ ಉದ್ಯಮದ ದೆಸೆಯಿಂದಾಗಿ ಕಾಡೆಲ್ಲ ಬೋಳಾಗಿ ಕಾಡಿನಲ್ಲಿದ್ದ ಮೃಗಬೇಟೆಯೂ, ನದಿಯೊಳಗಿನ ಮೀನುಗಳೂ, ಮಾಯವಾಗಿವೆ. ಈ ಪ್ರದೇಶಗಳಲ್ಲಿರುವ ಪಟ್ಟಣಗಳನ್ನೂ, ಅಲ್ಲಿನ ಶಾಲೆ ಸಂಸ್ಥೆಗಳದೇ ನಡೆಸಲು ಜೀವನಾಧಾರವಾದ ವಸ್ತುಗಳು ಸಿಗುವುದೇ ದುರ್ಲಭವೆಂದ ಮೇಲೆ,ಜನ ಅಲ್ಲಿಂದ ವಲಸೆ ಹೋದರೆ ತಪ್ಪೇನು? ಹಿಂದೆ ಧಾರಾಳವಾಗಿ ಹತ್ತಿ ಬೆಳೆಯುತ್ತಿದ್ದ ದಕ್ಷಿಣದ ಬಯಲಿನ ಅವಸ್ಥೆಯೂ ಹೀಗೆಯೇ. ಒಂದು ಕಾಲದಲ್ಲಿ ಹತ್ತಿಯ ಕಾಳು ಸಮೃದ್ಧವಾಗಿ ರಾರಾಜಿಸುತ್ತಿದ್ದ ಹೊಲಗಳಿಂದು ಮರಳುಗಾಡಾಗಿವೆ. ಅಂದು ಮಕ್ಕಳು ಮರಿಗಳಿಂದ ತುಂಬಿ ನಲಿದಾಡುತ್ತಿದ್ದ ಬಂಗಲೆಗಳಿಂದು ಗುಬ್ಬಿ ಗಬ್ಬಿಲಗಳಿಗೆ ಬೀಡಾಗಿವೆ. ಆಧುನಿಕ ಅವಿಷ್ಕಾರಗಳಿಂದ ಬರಬಹುದಾದ ಅಪಾಯವು ಈ ಎಲ್ಲವನ್ನೂ ಮೀರಿಸುವುದು. ಉದಾಹರಣೆಗೆ ವಿದ್ಯುತ್ತನ್ನೇ ತೆಗೆದುಕೊಳ್ಳೋಣ. ಕಾಡುಕಡಿಯುವ ಪ್ರದೇಶಕ್ಕೆ ವಿದ್ಯುತ್ತಿನ ಸೌಕರ್ಯವೂ ಲಭಿಸಿದರೆ, ಕಾಡು ಕಡಿತದ ಗತಿ ತೀವ್ರವಾಗುವುದಿಲ್ಲವೆ? ಕೈಕೊಡಲಿಗಳಿಂದ ಹತ್ತು ವರ್ಷಗಳಲ್ಲಿ ಮುಗಿಯುವ ಕಾಡು ಒಂದೇ ವರ್ಷದಲ್ಲಿ ನಾಶವಾಗುವುದಿಲ್ಲವೆ? ಅಂಥ ಭಯಂಕರ ಪರಿಸ್ಥಿತಿಯುಂಟಾಗದ ಹಾಗೆ ದೂರದೃಷ್ಟಿಯಿಂದ ಅದೇ ವಿದ್ಯುತ್ತನ್ನು ಪ್ರಾದೇಶಿಕ ಅಭಿವೃದ್ಧಿಯ ಇತರ ಅಂಗಗಳಲ್ಲಿಯೂ ಉಪಯೋಗಿಸಿದರೆ, ಅರ್ಥಾತ್ ಕಾಡು ಕಡಿಯುತ್ತ ಬಂದಂತೆ ಹೊಸದಾಗಿ ಕಾಡು ನೆಡುವುದಕ್ಕೂ ವಿದ್ಯುತ್ತನ್ನು ಪಯೋಗಿಸಿಕೊಂಡರೆ, ಮಾತ್ರ ವಿದ್ಯುತ್ತು ವರದಾನವಾದೀತು. ಇಲ್ಲವೋ, ನಮ್ಮ ದುಷ್ಕರ್ಮದ ಅಭಿಶಾಪವಾಗಿ ನಮ್ಮ ಮುಂದಿನ ಪೀಳಿಗೆಗಳಿಗೆ ಪೀಡೆಯಾದೀತು.

ಈ ಯುಗದ ಡಕ್‌ಟೌನಿನ ಕತೆ ಪುರಾತನ ಬೆಬಿಲೋನ ವಿನಾಶದ ಕತೆಗೆ ಬಹಳ ಬಿಡುವುದಿಲ್ಲ. ಡಕ್‌ಟೌನಿನ ಪುನರಾವರ್ತನೆ ಯಾಗದಿರಬೇಕಾದರೆ ಪ್ರಾದೇಶಿಕ ಬೆಳವಣಿಗೆಯ ಹೊಣೆಯನ್ನು ಹೊತ್ತ ನಾಯಕರು ಈಗಿನಿಂದಲೇ ಎಚ್ಚರಗೊಳ್ಳಬೇಕು. ನಿಸರ್ಗದ ಮುಖ್ಯ ನಿಯಮವಾದ ಐಕ್ಯವನ್ನು ಬಲವಾಗಿ ನೆಮ್ಮಿಕೊಂಡು, ಪ್ರದೇಶದ ಸರ್ವತೋಮುಖವಾದ ಉನ್ನತಿಯ ವಿಶಾಲ ಧ್ಯೇಯವನ್ನು ಕ್ಷಣಕ್ಷಣವೂ ಸ್ಮರಿಸುತ್ತಿರಬೇಕು.

# ಅಧ್ಯಾಯ ಏಳು.

## ಸಮರಸವೇ ಜೀವನ.

"ರಸವೆ ಜನನ

ವಿರಸ ಮರಣ

ಸಮರಸವೇ ಜೀವನ"

ಎಂದು ಕನ್ನಡನಾಡಿನ ಕವಿ ಹಾಡಿದ್ದಾನೆ. ಹಾಗೆ ಹಾಡಿ, ವಿಶ್ವಕವಿಗಳ ಪಂಙ್ತಿಗೆ ಸೇರಿದ್ದಾನೆ. ವಿಶ್ವದ ಸರ್ವತೋಮುಖವಾದ ಏಳಿಗೆಗೆ ಅವಶ್ಯವಾದ ಜೀವನ ಸೂತ್ರವೊಂದನ್ನು ನೆಯ್ದಿದ್ದಾನೆ. ಎಲ್ಲೆಲ್ಲೂ ವಿರಸ, ವೈಷಮ್ಯ, ಒಡಕು-ಕೆಡುಕುಗಳು ತಲೆಎತ್ತಿ ವಿಕಟಾಟ್ಟಹಾಸಮಾಡುತ್ತಿರುವ ಈ ಸಂಧಿಕಾಲದಲ್ಲಿ ಕವಿ ಹಾಡಿದ ಸಮರಸದ ಮಹಾ ತತ್ತ್ವಕ್ಕೆ ತಿಳಿದವರು ತಲೆಬಾಗಬೇಕು. ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ ಆ ಮಹಾ ತತ್ವವನ್ನು ಬಳಸಿಕೊಳ್ಳಬೇಕು. ರಾಜನೀತಿನಿಪುಣನಿರಲಿ, ಯಂತ್ರಜ್ಞನಿರಲಿ, ಶಿಲ್ಪಿ ಇರಲಿ, ಉದ್ದಿಮೆದಾರನಿರಲಿ, ಯಾರೇ ಆದರೂ ಸಮರಸದ ಪಾಠವನ್ನು ಕಲಿತು ಜೀರ್ಣಿಸಿಕೊಂಡು ಕಾರ್ಯಪ್ರವೃತ್ತರಾದರೆ ಮಾತ್ರ ವಿಶ್ವಬಾಂಧವ್ಯದ ಬಾಯಿಮಾತು ಕೃತಾರ್ಥವಾಗಬಹುದು. ಜೀವನ ಮರಣದ ನಿರ್ಣಯವನ್ನು ಮಾಡಬಲ್ಲ ಈ ಮಹಾ ತತ್ತ್ವದ ಪ್ರಯೋಗ ಪ್ರಪಂಚದ ಯಾವುದೋ ಒಂದು ಖಂಡದಲ್ಲಿ, ಯಾವುದೋ ಒಂದು ರಾಷ್ಟ್ರದ ಒಂದು ಪ್ರದೇಶದಲ್ಲಿ ನಡೆದರೂ, ಅದರ ಯಶಸ್ಸು, ಅದು ಹಾಕಿಕೊಡುವ ಆದರ್ಶ, ಇಡಿಯ ವಿಶ್ವಕ್ಕೆ ಕೈಗನ್ನಡಿಯಾಗುವುದು. ವಿಶ್ವಕಲ್ಯಾಣದ ಕನಸಿನ ಮುಂಡಿಗೆ ನೆನಸಿನ ದೀವಿಗೆಯಾಗಬೇಕಾದರೆ ಇಂಥ ಸಾಹಸದ ಪ್ರಯೋಗಗಳು ಹೆಚ್ಚು ಹೆಚ್ಚು ಜರಗಬೇಕು; ಪ್ರಪಂಚದ ಮೂಲೆ ಮೂಲೆಗಳಿಗೂ ಪಸರಿಸಿ ತಮ್ಮ ಜೀವನಸಂದೇಶವನ್ನು ಸಾರಬೇಕು. ಇದರಲ್ಲಿ ಟೀವೀಏಯ ಮಹತ್ತ್ವ ಅಡಕವಾಗಿದೆ. ಟೀವೀಏ ನಿಮಿಷ ನಿಮಿಷವೂ ಮಾಡಿ ತೋರಿಸಿ ಸಾರುವ ಸಂದೇಶದಲ್ಲಿ ವಿಶ್ವಕಲ್ಯಾಣದ ಜೀವಜೀವಾಳ ಹುದುಗಿಕೊಂಡಿದೆ.

ಒಡ್ಡು ಹಾಕುವ ಕೆಲಸವಿರಲಿ, ಮಣ್ಣಿನ ಸಾರಪಾಲನೆಯ ಹೊಣೆಗಾರಿಕೆ ಇರಲಿ, ವಿದ್ಯುತ್ತಿನ ಟರ್ಬೈನನು ತಿರುಗಿಸುವುದಿರಲಿ, ಕಾರ್ಯಾಲಯಗಳಲ್ಲಿ ಮೇಜಿನ ಮುಂದೆ ಕೂತು ಲೇಖನಿ ಎಳೆಯುವುದಿರಲಿ–ಎಲ್ಲ ಕೆಲಸಕ್ಕೂ ವಿಶಾಲವಾದ ಗುರಿಯನ್ನು ಕಾಣಬಲ್ಲ ನೋಟವೂ, ಅದಕ್ಕನುಗುಣವಾಗಿ ಹೆಜ್ಜೆ ಹೆಜ್ಜೆಗೂ ನಡೆಯಬಲ್ಲ ವಿಧೇಯಬುದ್ಧಿಯೂ ಇರುವುದು. ಟೇವೀಏಯಂಥ ಸಾಹಸಯುಕ್ತವಾದ ವಿಶಿಷ್ಟ ಪ್ರಯೋಗಗಳಿಗೆ ತಾನೇ ಸಾಧ್ಯ? "ಆಕಾಶಾತ್ಪತಿತಂ ತೋಯ"ದ ಒಂದೊಂದು ನೀರಹನಿಯೂ ಹೇಗೆ ಸಾಗರವನ್ನೇ ಸೇರುವ ಹವ್ಯಾಸದಲ್ಲಿರುವುದೋ, ಅಂತೆಯೇ ಒಂದೊಂದು ಚಿಕ್ಕ ಕೆಲಸವೂ ಜನಜೀವನದ ಉನ್ನತಿ ಎಂಬ ಮಹೋದ್ದೇಶದ ಕಡೆಗೆ ಅವಿಚಲವಾಗಿ ಧಾವಿಸಬೇಕು. ಈ ಬೃಹತ್ಕಾರ್ಯದಲ್ಲಿ ನೆಲ–ಜಲ–ಜನ ಈ ಮೂರು ಒಂದೆ ಸುನಿಶ್ಚಯದಿಂದ ದುಡಿಯಬೇಕು. ಬೇರೆ ಬೇರಾಗಿ ಆವು ಕೆಲಸಮಾಡಿದರೂ ಒಟ್ಟು ಫಲ ಒಂದೇ. ದೂರ ದೂರದ ಕಗ್ಗಾಡಿನಲ್ಲಿ ನೆಲಸಿದರೂ ಒಟ್ಟು ಗುರಿ ಒಂದೇ. ಒಂದು ಸಜೀವವಾಗಿದ್ದು, ಇನ್ನೊಂದು ನಿರ್ಜೀವವಾಗಿರುವಂತಹ ಮಹದಂತರವಿದ್ದರೂ ಚರಮಧ್ಯೇಯ ಒಂದೇ. ಹೀಗಿದ್ದರೆ ಮಾತ್ರ "ಸಮರಸವೇ ಜೀವನ" ಎಂದು ಕವಿಹಾಡಿದ್ದರ ಸಾರ್ಥಕ್ಯ; ಉಳಿದುದೆಲ್ಲವೂ ನಿರರ್ಥಕ.

ಟೇವೀಏ ಕೆಲಸಗಾರರನ್ನು ಆರಿಸಿದ ಕ್ರಮದಲ್ಲಿ ಸಾಮರಸ್ಯದ ತತ್ತ್ವ ಅಡಕವಾಗಿರುವುದನ್ನು ಕಾಣಬಹುದು. ಅಲ್ಲೊಮ್ಮೆ ಇಲ್ಲೊಮ್ಮೆ ಕೆಲಸಗಾರರನ್ನು ಹೆಕ್ಕಿತೆಗೆದು, ಕೆಲಸಮುಗಿದ ಕೂಡಲೆ ಅವರನ್ನು ಗಡಿಪಾರು ಮಾಡುವ ದುರಭ್ಯಾಸ ಟೇವೀಏಗಿಲ್ಲ. ಟೇವೀಏ ಅಧಿಕಾರಿಗಳು ತಾವೇ ಪ್ರತ್ಯಕ್ಷವಾಗಿ ಕೆಲಸಗಾರರನ್ನಾರಿಸಿದರು; ಅವರಿಗೆ ತಾವೇ ಮಜೂರಿ ತೆತ್ತರು. ಮೇಲ್ವಿಚಾರ ನಡೆಸಿದರು, ಯೋಗ್ಯವಾದ ತರಬೇತಿ ಕೊಡಿಸಿದರು. ಇದರಿಂದಾಗಿ ಟೇವೀಏ ಕೆಲಸಗಾರನಿಗೆ ನಿರಂತರವಾದ ಶಿಕ್ಷಣ, ಉದ್ಯೋಗ, ಅಭ್ಯಾಸ, ದೊರೆತು, ಆತನಿಗೆ ಟೇವೀಏ ಅಭಿವೃದ್ಧಿಯ ಕುರಿತು ಸ್ವತಂತ್ರವಾದ ಒಂದು ಅಭಿರುಚಿ ಉತ್ಪನ್ನವಾಗುವುದು. ಇದು ಮೊದಲನೆಯ ಲಾಭ.

ಎರಡನೆಯದಾಗಿ, ಸತತವಾದ ತರಬೇತಿ ದೊರೆತು ಹಿಂದೆ ಗೇಣಿ ಒಕ್ಕಲುಗಳಾಗಿದ್ದ ರೈತಜನ ಈಗ ಕುಶಲಶಿಲ್ಪಿಗಳಾಗಿದ್ದಾರೆ. ಹೊಲದ ನೀರಿನ ಪಂಪು ಕೆಟ್ಟುಹೋದರೆ ಅವರು ಟೇವೀಏ ಇಂಜನಿಯರುಗಳ ಬರವನ್ನು ಕಾಯುವುದಿಲ್ಲ. ಹತ್ತು ಹದಿನೈದು ವರ್ಷಗಳ ಅನುಭವದಿಂದಾಗಿ ಟೆನಸಿ ಪ್ರದೇಶದ ಬೇಸಾಯಗಾರರಿಗೂ ಕಾರ್ಖಾನೆಯ ಕೆಲಸದ ಮಾಹಿತಿಯುಂಟಾಗಿದೆ. ಟೆನಸಿಕಂದರದ ತುಂಬ ಇಂಥ ಅನುಭವಿಕ ಕೆಲಸಗಾರರ ಒಂದು ಸೇನೆಯೇ ನಿರ್ಮಾಣವಾಗಿದೆ.

ಮೂರನೆಯದಾಗಿ, ಟ್ರ್ಯಾಕ್ಟರಿನ ಸೀಟಿನಲ್ಲಿ ಕೂತಿದ್ದ ಕೆಲಸಗಾರ ಅಲ್ಲಿಂದಿಳಿದು ನೇರವಾಗಿ ವಾಚನಾಲಯದಲ್ಲಿ ತಾಸೆರಡು ತಾಸು ಸದ್ದಿಲ್ಲದೆ ಕಳೆಯುವ ಪರಿಪಾಟಿ ಸಂಯುಕ್ತ ರಾಷ್ಟ್ರದಲ್ಲಿಯೇ ಆದರೂ ಅತ್ಯಪೂರ್ವವಲ್ಲವೆ? ಮನೆಗೆ ಗಾರೆಹಚ್ಚುವ ಉಪ್ಪಾರನು ಚೆಂಡಾಡುವ ನೋಟವಾಗಲಿ, ಅಥವಾ ಮರ ಸಿಗಿಯುವ ಕೂಲಿ ಮೂಗಿಗೆ ಕನ್ನಡಕ ಏರಿಸಿಕೊಂಡು ಟೇವೀಏ ಪ್ರದೇಶದ ಅಂದಾಜುಪಟ್ಟಿಯ ಲೆಕ್ಕವನ್ನು ಪರೀಶಿಲಿಸುವುದಾಗಲಿ, ಬೇರೆ ಎಷ್ಟು ದೇಶಗಳಲ್ಲಿ ನೋಡಲಿಕ್ಕೆ ಸಿಕ್ಕಾವು? ಆದರೆ ಟೇವೀಏ ಮಟ್ಟಿಗೆ ಇವೆಲ್ಲ ದಿನನಿತ್ಯದ ದೃಶ್ಯಗಳು. ಇವು ಸಾಧ್ಯವಾಗಲು ಹೇರಳ ಧನವ್ಯಯನಾಗಿರಬಹುದೆಂದು ಬೆದರುವ ಅಗತ್ಯವಿಲ್ಲ. ಮನೆಯ ಮುಂದಿಕೆ ಇರಲು ಸುವ್ಯವಸ್ಥಿತವಾದ ಮನೆಮಾರು, ಉಚಿತವಾದ ಆಹಾರ ವಿಹಾರದ ಏರ್ಪಾಡು, ಸಂತತ ಉದ್ಯೋಗ–ಇವಿಷ್ಟು ಸಿಗುವುದು ಖಂಡಿತವಾದರೆ ಕೆಲಸಗಾರರಿಗಿನ್ನೇನೂ ಬೇಡ- ಎಂಬುವರಿಂದಲೇ ಟೇವೀಏ ಇತಿಹಾಸದಲ್ಲಿ ಈ ವರೆಗೂ ಸಂಪು–ಪುಸ್ಕರದ ಅಧ್ಯಾಯಕ್ಕೆ ಎಡೆಯೇ ಇಲ್ಲದಿರುವುದು. ಅಸಂತೃಪ್ತಿ, ಅಭಾವ, ಮೇಲಿನಿಂದ ನಿಯಂತ್ರಣ, ಇದ್ದರೆ ತಾನೇ ಸಂಪಿಗೆ ಅವಕಾಶ? ಊಟತಿಂಡಿ, ಮನೆಮಾರು ಭದ್ರವಾದ ಮೇಲೆ ಗೇಯುವ ಜನ ಇದ್ದುದನ್ನು ಉಳಿಸಿಕೊಳ್ಳುವ ಯತ್ನದಲ್ಲೇ ಇರುವುದಲ್ಲದೆ, ಕೈಗೆಟುಕದ ಕನಸಿನ ಗಂಟಿಗೆ ಕೈನೀಡುವುದಿಲ್ಲ. ಆದುದರಿಂದ ರಾಜಕೀಯ ವಾಚಾಳಿಗಳಿಗೆ ಟೆನಸಿ ಕಂದರದಲ್ಲಿ ಎಡೆಯಿಲ್ಲ. ಇವರಲ್ಲಿಯೂ ಸಮರಸದ ತತ್ತ್ವ ಒಡಗೂಡಿದೆ. ಕೆಲಸಗಾರನಿಗೂ, ಟೇವಿಏಗೂ ಬರಿಯ ಹಣಕಾಸಿನ ಲೇವಾದೇವಿಯ ಸಂಬಂಧ ಮಾತ್ರ

ವಲ್ಲ. ಟಿನಸಿ ಕೇಂದರದ ಬೆಳವಣಿಗೆಯಲ್ಲಿ ಅವರಿಬ್ಬರೂ ಸಮಾನ ಪಾಲು ದಾರರು, ಇಬ್ಬರಿಗೂ ಅವರವರ ಹೊಣೆಯುಂಟು; ಜತೆಗೆ ಉನ್ನತಿಯಲ್ಲಿ ಪಾಲುಗಾರಿಕೆಯೂ ಉಂಟು. ಕೆಲಸಗಾರನಿಗೆ ಅವನ ಮಜೂರಿಕೊಟ್ಟೊಡನೆ ತನ್ನ ಕರ್ತವ್ಯ ಮುಗಿಯಿತೆಂದು ಟೀವೀಏ ಕೈಕಟ್ಟಿ ಕೂಡುವುದಿಲ್ಲ; 'ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ' ಬಂದೊಡನೆ ತನ್ನ ಕೆಲಸವಾಯಿತೆಂದು ಕೆಲಸಗಾರನೂ ಎಣಿಸಲಾರ.

ಒಂದು ಅಣೆಕಟ್ಟಿನ ಜಾಗದಲ್ಲಿ ಕೆಲಸಗಾರರು ವಾಸಮಾಡುತ್ತಿದ್ದಾಗ ಅವರ ಸೌಕರ್ಯಕ್ಕಾಗಿ ಏರ್ಪಡಿಸಿದ ವಾಚನಾಲಯ, ಸಾರ್ವಜನಿಕ ವಿಹಾರ ಕೇಂದ್ರ, ಈಜುವ ಕೊಳ, ಮನೆಮಠ ಮುಂತಾದುವನ್ನು ಅಲ್ಲಿಯ ಸ್ಥಾನಿಕ ಜನ ಉಪಯೋಗಿಸಿಕೊಳ್ಳುವಂತೆ ಟೀವೀಏ ಅನುಕೂಲವನ್ನು ಕಲ್ಪಿಸುವುದರಿಂದ, ಕೆಲಸಗಾರರು ಇನ್ನೊಂದು ಆಣೆಕಟ್ಟಿಗೆ ವಲಸೆ ಹೋದೊಡನೆ ಎಷ್ಟೋ ವೆಚ್ಚದಿಂದ ಕಟ್ಟಲ್ಪಟ್ಟ ಈ ಸಾರ್ವಜನಿಕ ಸಂಸ್ಥೆಗಳು ಪಾಳುಬೀಳುವುದಿಲ್ಲ. ಕೆಲಸಗಾರರು ಬಿಟ್ಟುಹೋದ ಮೇಲೆ ಈ ಸೌಕರ್ಯಗಳೆಲ್ಲ ತಮಗೂ ಲಭಿಸುವುದರಿಂದ ಸ್ಥಾನಿಕ ಮಂದಿ ಕೆಲಸಗಾರರ ಮೇಲೆ ವಿಶೇಷ ಅಭಿಮಾನ ಉಳ್ಳವರಾಗುತ್ತಾರೆ.

ಒಂದು ಕೆಲಸದ ಸಮೀಪ ಲಕ್ಷ್ಯವನ್ನು ಮಾತ್ರ ಪರಿಗಣಿಸುವ ಪಕ್ಷಕ್ಕೆ ಹೊಣೆಗಾರಿಕೆಯ ಅಂಶ ಕಡಮೆಯಾಗುವುದು ಸ್ವಾಭಾವಿಕ. ಒಡ್ಡು ಹಾಕಿದಾಗ ನದಿ ಮೇರೆವರಿದು ಸುತ್ತಲಿನ ಊರುಗಳನ್ನು ಮುಳುಗಿಸಿದ್ದಕ್ಕೆ ಊರವರಿಗೆ ನ್ಯಾಯಬದ್ಧವಾದ ಪರಿಹಾರ ಧನವನ್ನು ಕೊಟ್ಟು ಬಿಟ್ಟು ಹೊಣೆಗಾರಿಕೆಯನ್ನು ಜಾಡಿಸಿಕೊಳ್ಳುವುದೊಂದು ಕ್ರಮ. ಮುಳುಗಿಹೋದ ಊರವರನ್ನು ಅವರು ಮೆಚ್ಚುವಂಥ ಇನ್ನೊಂದು ಪ್ರದೇಶಕ್ಕೊಯ್ದು ಅವರಲ್ಲಿ ಮರಳಿ ಊರು ನಿರ್ಮಿಸಲು ನೆರವಾಗುವುದು ಇನ್ನೊಂದು ಕ್ರಮ. ಇವೆರಡರಲ್ಲಿ ಟೀವೀಏ ಅನುಸರಿಸುವುದು ಎರಡನೆಯ ಸುಸಂಸ್ಕೃತ ಕ್ರಮವನ್ನು. ಬರಿಯ ಲಾಭ-ನಷ್ಟ, ಆದಾಯ-ವೆಚ್ಚದ ಗುಣಕಾರ ಮಾಡುವ ಖಾಸಗೀ ಸಂಸ್ಥೆಗೆ ಊರು ಮುಳುಗಿದರೂ ಜನ ಮರದಡಿ ನೆಲಸುವುದಿಲ್ಲವೆಂಬ ಸಾಮಾನ್ಯ ಸತ್ಯಾಂಶ ಗೋಚರಿಸ

ಲಾರದು. ಹಾಗೆ ಒಮ್ಮೆಗೆ ಹೊಳೆದರೂ "ಅವರವರ ಪಾಡಿಗೆ ಅವರವರು" ಎಂಬ ಕಾರ್ಯಸೂತ್ರದ ಮೇಲೆ ಕೆಲಸಮಾಡುವ ಸಂಸ್ಥೆ 'ಅನ್ಯಾಯ'ದ ಹಾದಿಗೆ ಹೇಗೆ ಕಾಲಿಟ್ಟೀತು? ಖಾಸಗಿ ಉದ್ದಿಮೆಯ ತತ್ತ್ವವನ್ನು ಬದಿಗೊತ್ತಿ, ಸಾಹಸದಿಂದ ಮುಂದಡಿ ಇಡುವ ಟೀವೀಏಯ ಜಲಾಚ್ಛಾದಿತ ಪ್ರದೇಶದ ಅನುಭವದ ಪ್ರಕಾರ ಊರುಬಿಟ್ಟು ಹೋಗಬೇಕಾದ ಜನರಲ್ಲಿ ಸುಮಾರು ನೂರಕ್ಕೆಪ್ಪತ್ತರಷ್ಟು ಜನ ಹೊಸ ಸ್ಥಳದಲ್ಲಿಯೂ ಸಂತೃಪ್ತಿಯಿಂದ ಬಾಳುವೆ ಮಾಡುತ್ತಿರುವರೆಂಬ ವರದಿ ತುಂಬಾ ಆಶಾದಾಯಕವಾಗಿದೆ. ಯೋಜನಾಪದ್ಧತಿಯು ವಿಶಾಲವಾಗಿ ಸಾಮರಸ್ಯದ ತತ್ತ್ವವನ್ನೂ ಅಳವಡಿಸಿಕೊಂಡಾಗ ಜನಜೀವನದ ಸುಧಾರಣೆಯ ಕೆಲಸ ಎಷ್ಟು ಸುಗಮವಾಗುವುದೆಂಬುದಕ್ಕೆ ಇನ್ನೊಂದು ಉದಾಹರಣೆಕೊಟ್ಟು ಈ ವಿಷಯದ ವಿವರವನ್ನಿಲ್ಲಿಗೆ ನಿಲ್ಲಿಸೋಣ.

ಟೀವೀಏ ಜಲಾಶಯವೊಂದು ಊರುಮುಳುಗಿಸುವಾಗ ಅಲ್ಲಿನ ಮಸಣಭೂಮಿಯು ಮುಳುಗುವುದು ನಮಗೂ ನಿಮಗೂ ವಿಶೇಷವಲ್ಲವೆಂದು ತೋರಿದರೂ ಆ ಊರಿನ ಜನದ ಪಿತೃಾರಾಧನೆಯ ಬುದ್ಧಿ ಜಾಗ್ರತವಾಗದಿದ್ದೀತೆ? ಸರಿ, ಟೀವೀಏ ಅವರ ಕೋಮಲ ಭಾವನೆಗಳನ್ನು ನೋಯಿಸಲಾರದು. ಆ ಇಡಿ ಹೊಳ್ಳೆಲವನ್ನೇ ಹೊಸಜಾಗಕ್ಕೆ ಸಾಗಿಸಲಾಯಿತು. ಎಲ್ಲ ಶವದ ಪೆಟ್ಟಿಗೆಗಳನ್ನೂ, ಕ್ರೂಜೆಗಳನ್ನೂ ಹೊತ್ತು ತಂದು ಹೊಸ ಜಾಗದಲ್ಲಿ ಪ್ರತಿಷ್ಠಿಸಿ ಹೊಸ ಪ್ರೇತಭೂಮಿಯೊಂದು ಸೃಷ್ಟಿಯಾಯಿತು. ಇದರಿಂದ ಅಲ್ಲಿನ ಜನಕ್ಕೆ ಟೀವೀಏ ಮೇಲೆ ವಿಶೇಷ ಅಭಿಮಾನ ಮೊಳೆಯುವುದು ತೀರ ಸ್ವಾಭಾವಿಕ.

ಒಳ್ಳೆಯ ಕೆಲಸಕ್ಕೆ ಯಾವಾಗಲೂ ಅಡ್ಡಿಬರುವುದು ಹೆಚ್ಚಿನಪಾಲು ಜನರ ಮನಸ್ಸಿನಲ್ಲಿಯೇ. ಅದು ಬೆಳೆಯುವುದಕ್ಕೂ ಆ ಜಾಗದಲ್ಲಿ ಹುಲುಸಾದ ಭೂಮಿ ಇರುತ್ತದೆ. ರವಿಕಾಣದ್ದು ಮನಸ್ಸಿಗೆ ಕಾಣಿಸಿ ಬುದ್ಧಿಯಲ್ಲಿ ಬೇರುಬಿಡುತ್ತದೆ. ಇಂಥ ಜಿಡುಕಿನ ಅಡೆತಡೆಗಳು ನಿರ್ಮೂಲವಾಗಬೇಕಾದರೆ ನಾವುಮಾಡುವ ಕೆಲಸಕ್ಕೊಂದು ವಿಶಾಲವಾದ ಆದರ್ಶವಿರಬೇಕು. ಏಕೀಕೃತವಾದ ಪ್ರಾದೇಶಿಕ ಬೆಳವಣಿಗೆಗೆ ಏಕೋದ್ದೇಶ ಇರಬೇಕಾ

ವುದೂ, ಆ ಉದ್ದೇಶವನ್ನು ವಿಶೇಷಜ್ಞರು ಅರಿತಿರಬೇಕಾದುದೂ, ಅತ್ಯಗತ್ಯವಾಗಿದೆ. ಒಂದು ಟೀವೀಏಗೆ ಎಂತಹ ಎಲ್ಲ ವಿಶೇಷಜ್ಞರ ನೆರವು ಬೇಡ? ಭೂಗರ್ಭಶಾಸ್ತ್ರಜ್ಞರು, ಕೃಷಿತಜ್ಞರು, ರಾಸಾಯನಿಕರು, ಶಿಲ್ಪಿಗಳು, ಆರೋಗ್ಯಶಾಸ್ತ್ರಜ್ಞರು, ಮೀನುಗಾರಿಕೆ, ಕಾಡು ರಕ್ಷಣೆಯ ಬಗ್ಗೆ ವಿಶೇಷ ಮಾಹಿತಿಯುಳ್ಳವರು, ಗಣಿತಜ್ಞರು, ವಕೀಲರು ಹೀಗೆ ಇನ್ನೆಷ್ಟೋ ಶಾಸ್ತ್ರಗಳಲ್ಲಿ ಬಲ್ಲಿದರು–ಯಾರು ಬೇಕು, ಯಾರುಬೇಡ? ಮರಗಳ ತೊಗಟೆಯ ಮೇಲೆ ಉಂಗುರಗಳು ಬೀಳುವುದಿಲ್ಲವೆ? ಆ ಉಂಗುರಗಳನ್ನು ತಿಳಿದ 'ಡೆಂಡ್ರೋಲಜಿಸ್ಟ್' ಒಬ್ಬಕೂಡ ಟೀವೀಏ ನೌಕರಿಯಲ್ಲಿರುವನೆಂದ ಮೇಲೆ ಈ ವಿಶೇಷಜ್ಞಾನ ಎಷ್ಟು ವಿಪರೀತಕ್ಕೆ ಬೆಳೆದಿದೆ ಎಂದು ನಾವೇ ಊಹಿಸಬಹುದು. ಆದರೆ ಉಪಾಯವಿಲ್ಲ. ವಿಶೇಷಜ್ಞತೆ ನವಯುಗದ ಒಂದು ಲಕ್ಷಣ. ವಿಶೇಷಜ್ಞರನ್ನು ಬಿಟ್ಟು ಯಾವ ಕೆಲಸವೂ ನಡೆಯುವಂತಿಲ್ಲ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಈ ವಿಶೇಷಜ್ಞರು ತಮ್ಮ ತಮ್ಮ ವಿಶಿಷ್ಟವಲಯದೊಳಗೆನೆ ಸುತ್ತಾಡುವವರು. ಅವರನ್ನು ಆವರಿಸಿದ ವಿಶೇಷತೆಯ ಚಿಪ್ಪನ್ನೊಡೆದು ಅವರ ಕಣ್ಣು ಸಾಮಾನ್ಯವಾದ ಮಹೋದ್ದೇಶದ ಕಡೆಗೆ ಹಾಯುವಂತಾದರೆ ಅಂದಿಗೆ ಅವರ ವಿಶೇಷಜ್ಞಾನವು ಪರಿಪೂರ್ಣವಾದಂತೆ. ವಿಶೇಷ ಜ್ಞಾನವೊಂದೇ ಗುರಿಯಾಗಿ ಉಳಿಯದೆ ಅದು ಮಹೋದ್ದೇಶ ಸಾಧನೆಗೆ ನೆರವಾದಾಗ, ಹಾಗೆ ತಾನು ನೆರವು ನೀಡುತ್ತಿರುವೆನೆಂಬ ಅರಿವು ವಿಶೇಷಜ್ಞನಿಗೆ ಉಂಟಾದಾಗ, ದೊರೆಯುವ ಸತ್ಫಲಕ್ಕೆ ಎಣೆ ಇಲ್ಲ.

ಅಂಥ ಮಹೋದ್ದೇಶವನ್ನು ಅರ್ಥಮಾಡಿಕೊಂಡು ತಮ್ಮ ವಿಶೇಷಜ್ಞಾನದ ಸದುಪಯೋಗವನ್ನು ನೀಡುವುದಕ್ಕೆ ವಿಶೇಷಜ್ಞರು ನೆರವಾಗುವಂತೆ ಮಾಡುವುದು ಟೀವೀಏಯ ಸತತಯತ್ನಗಳ ಪೈಕಿ ಒಂದು. ಒಬ್ಬ ತಜ್ಞನಮಾತಿಗೂ, ಇನ್ನೊಬ್ಬ ತಜ್ಞನಮಾತಿಗೂ ತಾಕಲಾಟ ಬರದಂತೆ ಟೀವೀಏ ಸದಾ ಎಚ್ಚರವಿರುತ್ತದೆ. ಸಾಧ್ಯವಾದರೆ ಒಬ್ಬನ ಅಭಿಪ್ರಾಯವನ್ನು ತಳ್ಳಿ, ಇನ್ನೊಬ್ಬನದನ್ನು ಮನ್ನಿಸುವ ದುರಭ್ಯಾಸವೂ ಟೀವೀಏಗಿಲ್ಲ- ಅಂಥ ದುರಭ್ಯಾಸಕ್ಕೆ ಅವಕಾಶವೇ ಇಲ್ಲದಂತೆ ಮಾಡಲು ಟೀವೀಏ ತಜ್ಞರು ಸ್ವತಃ ತಾವಾಗಿ ಒಬ್ಬರ ಅಭಿಪ್ರಾಯಕ್ಕೆ ಪೂರಕವಾದ, ಸಂಘರ್ಷ

ಹೀನವಾದ, ಅಭಿಪ್ರಾಯಗಳನ್ನೇ ಮುಂದೊಡ್ಡುವ ವ್ಯವಸ್ಥೆ ಎಲ್ಲಕ್ಕಿಂತ ಲೇಸಲ್ಲವೆ? ಕಟ್ಟಕಡೆಗೆ ನಿರ್ಣಾಯಕವಾದ ತತ್ತ್ವ ಜನರಿಗೆ ಉಪಕಾರ ಎಂಬುದನ್ನು ಎಲ್ಲರೂ ಜ್ಞಾಪಿಸಿಕೊಂಡರೆ ಸಂಘರ್ಷಕ್ಕೆ ಎಡೆಯೇ ಇರುವುದಿಲ್ಲ.

ಟೀವೀಏ ಒಂದುಕಡೆ ಒಡ್ಡು ಹಾಕಿದ ಒಂದು ಸಂದರ್ಭವನ್ನು ನಿದರ್ಶನಕ್ಕೆ ತರೋಣ. ಒಡ್ಡು ಹಾಕಿದ ಕೂಡಲೆ ನೀರು ಹರಡಿದ್ದರಿಂದ ಮುಳುಗಿಹೋಗುವ ಊರು, ಗದ್ದೆ, ಹೊಲ ಮುಂತಾದ ಸೊತ್ತುಗಳನ್ನು ಬೆಲೆಗೆ ಪಡೆದುಕೊಳ್ಳಬೇಕಾದ್ದು ಸಹಜವೇ. ಅದರಲ್ಲಿ ಯಾರದೂ ಆಕ್ಷೇಪವಿಲ್ಲ. ಆದರೆ ಜಲಾಶಯದ ಕರೆಯಿಂದ ಎಷ್ಟು ದೂರದವರೆಗಿನ ಭೂಮಿ ಟೀವೀಏ ಪಡೆದುಕೊಳ್ಳಬೇಕು ಎಂಬ ಪ್ರಶ್ನೆ ಬಂತೋ ವಿವಾದ ಆರಂಭವಾಗುತ್ತದೆ: (೧) ಕೃಷಿತಜ್ಞನ ಮತದ ಪ್ರಕಾರ ನೀರಲ್ಲಿ ಮುಳುಗಿದಷ್ಟನ್ನೇ ಕೊಂಡುಕೊಂಡರೆ ಸಾಕು. (೨) ಸಾರ್ವಜನಿಕ ವಿಹಾರತಜ್ಞ ನೀರಿನ ದಡದಲ್ಲಿ ನೂರಾರು ಮೈಲಿ ಉದ್ದಕ್ಕೂ ನೈಸರ್ಗಿಕ ಸೌಂದರ್ಯ ರಕ್ಷಣೆಯ ಸಲುವಾಗಿ ವಿಹಾರ ಕೇಂದ್ರಗಳನ್ನು ರಚಿಸಬೇಕಾದುದರಿಂದ ಅಷ್ಟೆಲ್ಲ ಭೂಭಾಗ ಕ್ರಯಕ್ಕೆ ಪಡೆಯಲೇ ಬೇಕೆಂದು ಹಟತೊಡುತ್ತಾನೆ. (೩) ಮಲೇರಿಯಾ ನಿಯಂತ್ರಣದ ವಿಶೇಷಜ್ಞನಿಗೆ ಜಲಾಶಯದ ದಡದಲ್ಲಿ ಗೋಡೆಕಟ್ಟಬೇಕೆಂದು ಅನ್ನಿಸಬಹುದು. ಅದರ ನೀರು ತಗ್ಗು ನೆಲಕ್ಕೆ ಹರಿದು ಅಲ್ಲೆ ನಿಂತು ಮಲೇರಿಯಾ ಅಣುಗಳಿಗೆ ಮನೆಮಾಡಬಾರದಲ್ಲ? (೪) ವಿದ್ಯುತ್-ತಜ್ಞನಿಗೆ ಆದಷ್ಟು ಖರ್ಚು ಕಡಮೆಮಾಡುವುದೇ ಒಂದು ಉದ್ದೇಶವಾಗಿರುವುದರಿಂದ ಬೇರೆ ಯಾವ ಸಂಗತಿಯೂ ಅವನಿಗೆ ನಾಟಲಾರದು. ಎಷ್ಟು ಕಡಮೆ ಭೂಮಿಯಿಂದ ಕೆಲಸ ನಡೆಸಬಹುದೋ ಅದಕ್ಕಿಂತ ಒಂದು ತುಂಡು ಭೂಮಿಕೂಡ ಹೆಚ್ಚಾಗಿ ಪಡೆದುಕೊಳ್ಳಲಾಗದು. (೫) ಜಲಸಂಚಾರದ ತಜ್ಞನದು ಬಲು ದೂರದೃಷ್ಟಿ. ಮುಂದಕ್ಕೆ ಜಲಾಶಯದಲ್ಲಿ ಜಲಸಂಚಾರ ಹೆಚ್ಚಾಗಿ, ದೋಣಿನಡೆಸುವವರಿಗೆ ಅನುಕೂಲಿಸುವುದರ ಸಲುವಾಗಿ ದಡದಲ್ಲಿ ನಿಲುಮನೆ ನಿರ್ಮಿಸಲು ಸಾಧ್ಯವಾಗುವಂತೆ ಈಗಲೇ ಬೇಕಾಗುವಷ್ಟು ಭೂಮಿ ಪಡೆದುಕೊಳ್ಳಬೇಕು. (೬) ಇನ್ನು

ಪ್ರಾಚೀನ ಶೋಧಕನಿಗೆ ಎಲ್ಲಿ ಅಮೂಲ್ಯವಾದ ನಾಗರಿಕತೆಗಳ ಕುರುಹು ನೀರಿನೊಳಗೆ ಮುಳುಗಿ ಬಿಡುವುದೋ ಎಂಬ ಭೀತಿ, ಕಳವಳ, ಚಿಂತೆ!

ಟೀವೀಏ ಆಡಳಿತಕ್ಕೆ ಒಳಪಡದ ಪ್ರದೇಶವಾಗಿದ್ದರೆ ಈ ಪ್ರಶ್ನೆಗಳ ಮೇಲೆ ಯಾವ ರೀತಿಯ ತೀರ್ಮಾನವಾಗುತ್ತಿತ್ತೋ, ಯಾರ ಅಭಿಪ್ರಾಯಕ್ಕೆ ಮನ್ನಣೆ ದೊರೆಯುತ್ತಿತ್ತೋ ಹೇಳಲಾರೆವು. ಒಂದೇ ಶಿಫಾರಸು ಜೋರಾಗಿ ನಡೆಸಿದವನ ಮಾತು, ಇಲ್ಲವೆ ಗಟ್ಟಿಯಾದ ಗಂಟಲುಳ್ಳ ವ್ಯಕ್ತಿಯ ಮಾತು ನಡೆಯುತ್ತಿತ್ತೋ ಏನೋ. ಆದರೆ ಟೀವೀಏ ನಿರ್ಣಯದ ಪರಿಯೇ ಬೇರೆ. ನಿರ್ದಿಷ್ಟವಾದ ಒಂದೇ ಒಂದು ಅಭಿಮತಕ್ಕೆ ಮನ್ನಣೆ ಕೊಟ್ಟು ಉಳಿದುವನ್ನು ಬಿಟ್ಟುಬಿಡುವುದು ಟೀವೀಏ ಮಟ್ಟಿಗೆ ಅಸಾಧ್ಯವೆಂದು ಹೇಳಲೇ ಬೇಕು. ಟೀವೀಏಯ ಮಹೋದ್ದೇಶಕ್ಕೆ ಈ ಅಭಿಮತಗಳು ಎಷ್ಟೆಷ್ಟು ಪೋಷಕವಾಗುತ್ತವೋ, ಅಷ್ಟುಮಟ್ಟಿಗೆ ಅವುಗಳ ಮತದ ಸಾರವನ್ನು ಸ್ವೀಕರಿಸುವುದಕ್ಕಡ್ಡಿ ಇಲ್ಲ. ಟಿನಸಿ ಪ್ರದೇಶದ ಜನರ ಬಾಳನ್ನು ಹಸನುಮಾಡಲು ಯಾವ ಮತ ಯಾ ಮತಗಳು ಸಾಧಕವಾಗಬಲ್ಲವೋ, ಅವೆಲ್ಲಕ್ಕೂ ಟೀವೀಏಯಲ್ಲಿ ಸ್ವಾಗತ ಉಂಟು. ಸರ್ವತೋಮುಖ ಬೆಳವಣಿಗೆಯ ಮಹೋದ್ದೇಶಕ್ಕೆ ನೆರವಾಗದೆ "ಕುರುಡ ಹಿಡಿದದ್ದೇ ಬಡಿಗೆ" ಎಂದು ವಿಶೇಷಜ್ಞತೆಯ ಸಂಕುಚಿತ ಮನೋವೃತ್ತಿಯನ್ನು ತೋರಿಸುವ ಯಾವ ಅಭಿಮತಕ್ಕೂ ಅಲ್ಲಿ ಮನ್ನಣೆ ಇಲ್ಲ. ಒಂದು ಸಮಸ್ಯೆಯನ್ನು ಪೂರ್ಣವಾಗಿ, ಸಮಗ್ರವಾಗಿ ನೋಡುವಾಗ ಪೂರ್ಣದೃಷ್ಟಿ ಸಹಜವಾಗಿ ಬರುವುದರಿಂದ ಸಂಕುಚಿತ ದೃಷ್ಟಿಗೆ ಅವಕಾಶ ಒದಗುವುದಿಲ್ಲ.

ಮಲೇರಿಯಾ ತಜ್ಞರೂ, ವಿದ್ಯುತ್ ಶಕ್ತಿಯ ತಜ್ಞರೂ ಜಟಾಪಟಿ ಮಾಡುವ ಒಂದು ಸಂದರ್ಭವನ್ನು ಟೀವೀಏ ಹೇಗೆ ನಿವಾರಿಸಿಕೊಂಡಿದೆ ಎಂಬುದನ್ನು ಪರಿಶೀಲಿಸೋಣ. ಒಡ್ಡು ಹಾಕಿದಾಗ ಉಂಟಾಗುವ ಜಲಾಶಯ ಮಲೇರಿಯಾ ರೋಗ ಹರಡುವ ಅನೊಫಿಲಿಸ್ ಸೊಳ್ಳೆ ಬೆಳೆಯುವ ಕ್ಷೇತ್ರವಾಗುವುದು ಸ್ವಾಭಾವಿಕ ತಾನೆ. ಮಲೇರಿಯಾ ಟೀವೀಏ ಪ್ರದೇಶದ ಜೀವ ಹಿಂಡುವುದರಿಂದ ಮಲೇರಿಯಾ ನಿರ್ಮೂಲನವು ಟೀವೀಏಯ ಮುಖ್ಯ ಉದ್ದೇಶಗಳಲ್ಲೊಂದಾಗಿದೆ. ಈ ಮಲೇರಿಯಾ ನಿರ್ಮೂಲನಕ್ಕೆ

ಒಂದು ಸುಲಭವಾದ ಉಪಾಯವುಂಟು. ಜಲಾಶಯದ ನೀರನ್ನೆಲ್ಲ ಒಂದು ಹೊತ್ತಾರೆ ಒಮ್ಮೆಲೆ ಒಡ್ಡಿನ ದ್ವಾರಗಳ ಮೂಲಕ ಹೊರಗೆ ಹರಿಯಗೊಟ್ಟರೆ ಅನೊಫಿಲೀಸಿನ ಮರಿಗಳೆಲ್ಲ ದಡದ ಮಣ್ಣಿನ ಮೇಲೆ ಬಿದ್ದು ಬಿಸಿಲಜಳಕ್ಕೆ ತುತ್ತಾಗಿ ಸತ್ತುಬಿಡುತ್ತವೆ. 'ಸರಿ, ಹಾಗೆಯೇ ಮಾಡೋಣ' ಎಂದು ಮಲೇರಿಯಾ ತಜ್ಞನೆಂದುದನ್ನು ವಿದ್ಯುಚ್ಛಕ್ತಿಯ ತಜ್ಞನೆಲ್ಲಾದರೂ ಕೇಳಿದರೆ "ಛೇ, ಅದು ಸಾಧ್ಯವೇ ಇಲ್ಲ. ಹಾಗೆಲ್ಲ ನೀರು ಹೊರಗೆ ಬಿಟ್ಟು ಪುಕ್ಕಟೆಯಾಗಿ ವಿದ್ಯುತ್ತನ್ನು ತಯಾರಿಸುವ ಸಂದರ್ಭ ಕಳೆದುಕೊಳ್ಳುವುದೆ? ಲಕ್ಷಗಟ್ಟಲೆ ಡಾಲರು ನೀರಿಗೆ ಚೆಲ್ಲುವುದೇ?" ಎಂದು ಖಂಡಿತವಾಗಿಯೂ ಆತ ವಿರೋಧಿಸುತ್ತಾನೆ. ಆದರೆ ಟೀವೀಏ ತಜ್ಞ ವಿರೋಧಿಸಲಾರ. ಹೋದ ಯುದ್ಧದ ಸಮಯ, ಅಂದರೆ ಯುದ್ಯೋದ್ಯಮಗಳಿಗೆ ವಿದ್ಯುಚ್ಛಕ್ತಿ ಅತ್ಯಾವಶ್ಯಕವಾಗಿ ಬೇಕಾದಾಗ, ಒಂದು ಜಲಾಶಯದ ಸಮೀಪ ಮಲೇರಿಯಾ ಹಾವಳಿ ವಿಪರೀತವಾಗಿ ಹಬ್ಬಿತು. ವಿಶೇಷತರದ ಕಾರ್ಯಕ್ರಮವನ್ನು ಕೈಗೊಳ್ಳದೆ ಹಾವಳಿ ತಗ್ಗುವಂತಿರಲಿಲ್ಲ. ನೀರು ಹೊರಗಟ್ಟಲೇಬೇಕಾಯಿತು. ಆದರೆ ಹಾಗೆ ನಿರ್ಧಾರಕ್ಕೆ ಬರುವ ಮೊದಲು ಮಲೇರಿಯಾ ತಜ್ಞ ತನ್ನ ನಿಯತಕಾಲಿಕ ಪರಿಶೋಧನೆಯ ಬದಲು ಇನ್ನೂ ತೀವ್ರವಾದ ದೈನಂದಿನ ಪರಿಶೋಧನೆಯನ್ನು ಮಾಡಿ ಪರಿಸ್ಥಿತಿಯ ಗಾಂಭೀರ್ಯವನ್ನು ವಿದ್ಯುಚ್ಛಕ್ತಿಯ ತಜ್ಞರಿಗೂ ಅರಿವು ಮಾಡಿ ಕೊಟ್ಟುದರಿಂದ ಅವರ ಅಭಿಪ್ರಾಯವನ್ನು ಪ್ರತಿನಿಧೀಕರಿಸುವ ಭಾರವನ್ನೂ ವಿದ್ಯುಚ್ಛಕ್ತಿಯ ತಜ್ಞರು ಅವನಿಗೆಯೆ ಒಪ್ಪಿಸಿದರು. ಮಲೇರಿಯಾ ತಜ್ಞ ಟೀವೀಏ ಅಧಿಕಾರಿಗಳ ಬಳಿ ಮಾಹಿತಿಕೊಡಲು ಬಂದಾಗ ಅವನ ಕಣ್ಣಿಗೆ ಅನೋಫಿಲಿಸ್ ಮಾತ್ರವಲ್ಲದೆ ಡಾಲರು ಸೆಂಟುಗಳ ಲೆಕ್ಕವೂ ಗೋಚರಿಸುತ್ತಿದ್ದುದರಿಂದ ಸಮಸ್ಯೆಯನ್ನು ಸಮಗ್ರವಾಗಿ ನೋಡಲು ಅನುಕೂಲವಾಯಿತು.

ಉದ್ದ ಚಲ್ಲಣ, ಚೌಕಳಿಅಂಗಿ, ತಲೆಯ ಮೇಲೆ ಮರಿಗೆಟೊಪ್ಪಿ, ಈ ಉಡುಪಿನ ಒಬ್ಬ ಮನುಷ್ಯ ಅಪಲೇಚಿಯನ್ ಬೆಟ್ಟದ ತುದಿಯಲ್ಲಿ ಕೈಗಳೆರಡನ್ನು ಕಿಸೆಗೆ ಸೇರಿಸಿಕೊಂಡು ಒಂದುಕಾಲನ್ನು ಮುಂದಕ್ಕಿಟ್ಟು ನಿಂತಿದ್ದಾನೆ. ಕೆಳಗಿನ ಕಂದರದ ಕಡೆಗೆ ಕಣ್ಣಾಡಿಸಿಯುವಷ್ಟು ದೂರದ

ಟೆನಸಿ ದಿಗಂತದ ಕಡೆಗೆ ಅವನ ದೃಷ್ಟಿ- ಟೆನಸಿ ಪ್ರದೇಶವೆಲ್ಲವನ್ನೂ ಒಂದು ಐಕ್ಯವಾಗಿ ನೋಡುವ ಪೂರ್ಣ ದೃಷ್ಟಿ. ಟೆನಸಿ ರೈತನನ್ನು ಜ್ಞಾಪಿಸಿಕೊಳ್ಳುವಾಗ ನಮ್ಮ ಕಣ್ಣಮುಂದೆ ಬರಬೇಕಾದ ಚಿತ್ರ ಇದು. ಪ್ರಾದೇಶಿಕ ಜೀವಣಿಗೆಯ ಸಮಗ್ರತೆಯ ಒಂದು ಪ್ರತೀಕ ಇದು.

ಟೆನಸಿ ಯೋಜನೆಯಲ್ಲಿ ಸರ್ವತ್ರ ಹರಡಿರುವ ಸಾಮರಸ್ಯಕ್ಕೆ ಸಾಮಾನ್ಯ ಜನ ಹೇಗೆ ನೆರವಾಗಿದ್ದಾರೆಂಬುದನ್ನು ನೋಡುವುದು ಮುಂದಿನ ಕೆಲಸ. ಪ್ರಜಾತಂತ್ರದ ಹಿರಿಹುದ್ದರಿಯೆಂದು ಘಂಟಾಘೋಷವಾಗಿ ಸಾರುತ್ತಿರುವ ಅಮೇರಿಕದ ಸಂಯುಕ್ತ ರಾಷ್ಟ್ರದಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೊಂದು ವಿಶಿಷ್ಟವಾದ ಸ್ಥಾನವುಂಟೆಂಬುದು ನಿಜ. ವ್ಯಕ್ತಿಯ ಭಾವನೆ, ಶಿಕ್ಷಣ, ಆಚರಣೆಗಳಿಗೆ ಸಂದರ್ಭ ಒದಗಿಸಬೇಕೆಂದು ಸರಕಾರ ಹೊಣೆಹೊತ್ತಿರುವುದೂ ನಿಜ. ಅಂದರೆ ಪ್ರಜಾತಂತ್ರದ ಸಾರ್ಥಕ್ಯವಾಗುವುದು ವ್ಯಕ್ತಿ ಆಡಳಿತೆಯ ಬಗ್ಗೆ ಆಸ್ಥೆವಹಿಸಿದಾಗ ಮಾತ್ರವೆಂದೂ, ಅಂಥ ಆಸ್ಥೆ ಆತನಿಗೆ ಬರಬೇಕಾದರೆ ಆತ ಆಡಳಿತೆಯಲ್ಲಿ ಪ್ರತ್ಯಕ್ಷವಾಗಿ ಅನುಭವ ಪಡೆಯಬೇಕೆಂದೂ, ಪ್ರಜಾತಂತ್ರದ ತತ್ತ್ವವೇತ್ತರು ಹೇಳುತ್ತಾರೆ. ದೊಡ್ಡದೊಡ್ಡ ಕಾರ್ಖಾನೆಗಳು, ಅದ್ಭುತವಾದ ವೈಜ್ಞಾನಿಕ ಪರಿಶೋಧನೆಯ ಗರ್ಭದಿಂದ ಬಂದುಸೂಕ್ಷ್ಮದ ಯಂತ್ರಗಳು ಮುಂತಾದ ಆಧುನಿಕ ಆವಿಷ್ಕಾರಗಳ ನಡುವೆ ವ್ಯಕ್ತಿಯ, ಗಾತ್ರ ತೀರ ಚಿಕ್ಕದಾಗಿಬಿಡುತ್ತದೆ. ವ್ಯಕ್ತಿಯಲ್ಲಿ ನಿಸ್ಸ್ಪೃಹತಾಭಾವನೆ ಮೊಳೆಯುವುದಕ್ಕೆ ಅವನ ಸುತ್ತುಮುತ್ತಲಿನ ಈ ಬೃಹತ್ ಯಂತ್ರಗಳೇ ಸಾಕು. ಜತೆಗೆ ಎಲ್ಲೋ ದೂರದಲ್ಲಿರುವ ಫೆಡರಲ್ ಸರಕಾರದ ಪೆಡಂಭೂತವೂ ಆವಿರ್ಭವಿಸಿದರೆ, ಸಾಮಾನ್ಯ ವ್ಯಕ್ತಿ ಸಂಕೋಚದಿಂದ ಇನ್ನಷ್ಟು ಕುಸಿಯುತ್ತಾನೆ. ಅದೃಶ್ಯವಾದ ಶಕ್ತಿಯ ಸುಂಟರಗಾಳಿಯಲ್ಲಿ ತಾನೊಂದು ತರಗೆಲೆಯೆಂದು ಯಃಕಶ್ಚಿತ್ ಭಾವವನ್ನು ತಳೆಯುತ್ತಾನೆ. ಇದು ಸ್ವಾತಂತ್ರ್ಯದ ಒರತೆಗೆ ಹೆಮ್ಮಾರಿ. ವಿಶ್ವಕಲ್ಯಾಣಕ್ಕೆ ಅತಿದೊಡ್ಡ ಬಾಧಕ.

ವ್ಯಕ್ತಿಸ್ವಾತಂತ್ರ್ಯದ ಪ್ರಶ್ನೆಗೆ ಯುದ್ಧಾನಂತರದ ಜಗತ್ತಿನಲ್ಲಿ ಒಂದು ಉಬ್ಬರ ಬಂದಿದೆ. ವ್ಯಕ್ತಿಸ್ವಾತಂತ್ರ್ಯದ ಈ ಬೊಬ್ಬೆಯಲ್ಲಿ ಕಾಳೆಷ್ಟು? ಜಳ್ಳೆಷ್ಟು? ಎಂಬುದನ್ನು ಹೆಕ್ಕಿತೆಗೆಯುವಾಗ ಟೀವೀಏಯಂಥ ಪ್ರಯೋ

ಗರಚನೆಯಲ್ಲಿಯೆ ವ್ಯಕ್ತಿಸ್ವಾತಂತ್ರ್ಯದ ಮರ್ಮ ಅಡಗಿರುವುದನ್ನು ಕಾಣು ತ್ತೇವೆ. ಟೀವೀಏ ಮಾಡಿದ ಒಂದೊಂದು ನಿರ್ಧಾರದಲ್ಲಿಯೂ ಟೆನಸಿಯ ಜನಮತಕ್ಕೆ ಮನ್ನಣೆ ಇರುವುದರಿಂದ ವ್ಯಕ್ತಿಸ್ವಾತಂತ್ರ್ಯವು ಕಾರ್ಯರೂ ಪಕ್ಕೆ ಬಂದಿದೆ ಎಂದು ಹೇಳಲಡ್ಡಿ ಇಲ್ಲ. ತಾನಾಗಿ ಭಾಗವಹಿಸಿದ ಒಂದು ಕಾರ್ಯದಲ್ಲಿ, ತನ್ನ ಮಾತು ನಡೆಯುವ ಒಂದು ಪ್ರಸಂಗದಲ್ಲಿ, ಮತ್ತು ತನ್ನ ಹಿತ ತನ್ನ ಕೈಯಿಂದಲೇ ಆಗುವ ಸಂದರ್ಭ ಉಂಟಾದಲ್ಲಿ, ವ್ಯಕ್ತಿ ವಿಶೇಷ ಆಸಕ್ತಿಯನ್ನು ತಾಳುವುದು ಸ್ವಾಭಾವಿಕವಾಗಿದೆ. - ಕಾಲಕ ಳೆದಂತೆ ಟೆನಸಿ ಜನದ ಸಹಕಾರದ ಅಂಶ ಟೀವೀಏ ಆಡಳಿತದಲ್ಲಿ ಅಧಿಕ ವಾಗುತ್ತ ಬರುತ್ತಿದೆ. ಆದುದರಿಂದ ಪ್ರಜಾತಂತ್ರದ ಆ ಚರಮಲಕ್ಷ್ಯದ ಕಡೆಗೆ ಟೀವೀಏ ಮುಂದೆಸಾಗುತ್ತಿದೆ ಎಂದರ್ಥ.

ವ್ಯಕ್ತಿಸ್ವಾತಂತ್ರ್ಯ ಮತ್ತು ವ್ಯಕ್ತಿಶಃ ನಿರ್ಧಾರಕ್ಕೆ ಟೀವೀಏ ಕೊಟ್ಟಿ ರುವ ಮಹತ್ತ್ವವನ್ನು ಹೊಲಬೇಸಾಯದ ರೈತರ ಮೂಲಕ ಉದಾಹರಿಸ ಬಹುದು. ಟೆನಸಿಯ ಪಾತ್ರದಲ್ಲಿ ಒಂದೂವರೆ ಮಿಲಿಯ ಜನರುಳ್ಳ ಒಟ್ಟು ೨,೫೦,೦೦೦ಹೊಲಗಳಿವೆ. ಹೊಲದ ಪಿಡುಗೇನೆಂದು ಅವರಿಗೆ ಎಂದಿನಿಂದಲೋ ತಿಳಿದಿದ್ದರೂ, ಅದನ್ನು ನಿವಾರಿಸಲು ಅವರು ಸರಿಯಾದ ದಾರಿ ಹಿಡಿಯಲಿಲ್ಲ. ಟೀವೀಏ ಟೆನಸಿಪಾತ್ರದಲ್ಲಿ ಪುನರ್-ರಚನೆಯ ಕಾರ್ಯ ಕೈಕೊಂಡಾಗ ಟೆನಸಿ ರೈತನಿಗದು ಮನಸ್ಸಿಗೆ ಅಷ್ಟು ಹಿಡಿಸಲಿಲ್ಲ. ಆದರೆ ಪುನರ್ ರಚನಾಕಾರ್ಯದಲ್ಲಿ ಅವನಿಗೂ ಒಂದು ಸ್ಥಾನ ದೊರೆತಾಗ ಆತ ಹುಮ್ಮಸಿನಿಂದ ಟೀವೀಏಯೊಡನೆ ಸಹಕರಿಸುವಂತಾಯಿತು.

ಟೀವೀಏ ಬರುವುದಕ್ಕೆ ಮುಂಚೆ ಹೊಲಗಳ ಕುರಿತಾದ ವಿಶೇಷ ಮಾಹಿತಿ ಯವರದಿಗಳು ಕೃಷಿ ಇಲಾಖೆಯಿಂದ ಪ್ರಕಟಿಸಲ್ಪಡುತ್ತಿದ್ದುವು. ಅವುಗಳಲ್ಲಿ ತೀರ ಸಾಮಾನ್ಯವಾದ ಪರಿಹಾರ ವಿಧಾನಗಳೂ, ಬೇಸಾ ಯದ ಉನ್ನತಿಯ ಪದ್ಧತಿಗಳೂ ಸೂಚಿಸಲ್ಪಡುತ್ತಿದ್ದುದರಿಂದ, ಯಾವುದೇ ಒಂದು ನಿರ್ದಿಷ್ಟವಾದ ಹೊಲಕ್ಕೂ, ರೈತನಿಗೂ ಅದರಿಂದ ಉಪಯೋಗ ವಿರಲಿಲ್ಲ. ಅಂಥ ವರದಿಗಳ ಮುಖ್ಯ ದೋಷವೇನೆಂದರೆ: (೧) ಅಲ್ಲಿಷ್ಟು ಇಲ್ಲಿಷ್ಟು ಚೂರು ಚೂರಾಗಿ ತಿಳುವಳಿಕೆ ಬರೆದಿಟ್ಟರೆ ಅದರಿಂದ ಬೇಸಾಯ ವನ್ನು ಅಖಂಡವಾಗಿ ನಡೆಯಿಸುವ ರೈತ ತಬ್ಬಿಬ್ಬಾಗಬೇಕು. (೨) ರೈತನ

ವಿಶಿಷ್ಟವಾದ ಸಮಸ್ಯೆಗೂ ಪುಸ್ತಕದ ಬದನೆಕಾಯಿಗೂ ಹೆಚ್ಚಿನಪಕ್ಷ
ಸಂಬಂಧವೇ ಇರುತ್ತಿದ್ದಿಲ್ಲ. (೩) ಕೃಷಿತಜ್ಞರು ತಮ್ಮ ಜ್ಞಾನದ ಭರದಲ್ಲಿ
ವರ್ಜಿಸಿದ ಡಜನುಗಟ್ಟಲೆ ಪರಿಹಾರ ಕ್ರಮಗಳಲ್ಲಿ ಯಾವುದನ್ನಾರಿಸಬೇ
ಕೆಂಬುದೇ ರೈತನ ಸಮಸ್ಯೆಯಾಗಿಬಿಡುತಿತ್ತು. (೪) ಈ ತಿಳುವಳಿಕೆಯ
ಪ್ರಕಾರ ಕೆಲಸಕ್ಕೆ ಕೈಹಚ್ಚೋಣವೆಂದರೆ ಹತ್ತಿಪ್ಪತ್ತು ಸರಕಾರಿ ಇಲಾಖೆ
ಗಳೊಡನೆ ಲೇವಾದೇವಿ ನಡೆಸುವುದು ರೈತನಿಗೆ ಅಸಾಧ್ಯವಾದ ಮಾತು.
ಈ ನಾಲ್ಕು ದೋಷಗಳನ್ನು ಚೆನ್ನಾಗಿ ಮಥಿಸಿ ನೋಡಿದರೆ, ಅಗಣಿತವಾದ
ವಿಶೇಷ ವೈಜ್ಞಾನಿಕ ಸತ್ಯಗಳನ್ನೂ, ಆಧುನಿಕ ಮಾಹಿತಿಗಳನ್ನೂ ಬೇಸಾ
ಯಗಾರರಿಗೆ ಪ್ರಚಾರಮಾಡುವುದಕ್ಕಿಂತ ಪ್ರತಿಯೊಂದು ಹೊಲದಲ್ಲಿ ಈ
ಮಾಹಿತಿಯು ಒಂದಶವಾದರೂ ಇಳಿದು ಕೆಲಸಕ್ಕೆ ಬಿದ್ದರೆ ಅದೇ ಎಷ್ಟೋ
ಚೆನ್ನ. ಮಣ್ಣಿನಸಾರಪಾಲನೆಯ ವಿಷಯ ಉದ್ದುದ್ದವಾದ ಲೇಖನ ಬರೆ
ಯುವುದಕ್ಕಿಂತ ರೈತನ ಹೊಲಕ್ಕೆ ಕೊಂಚ ಫೋಸ್‌ಫೇಟ ತಂದು ಅದರ
ಪ್ರತ್ಯಕ್ಷ ಉಪಯೋಗವನ್ನು ಅವನಿಗೆ ಕಲಿಸುವುದು, ಅಥವಾ ಅದನ್ನು
ಅವನೇ ಉಪಯೋಗಿಸಿ ಕಲಿಯುವಂತೆ ನೋಡಿಕೊಳ್ಳುವುದು ಮೇಲು.
ಇದರಿಂದ ಫೋಸ್‌ಫೇಟ ಉಪಯೋಗಿಸುವ ರೈತನಿಗೂ ಅನುಭವದೊರೆ
ಯುತ್ತದೆ. ಆ ಅನುಭವದಿಂದ ಫೋಸ್‌ಫೇಟ ತಯಾರಿಸುವ ರಾಸಾಯ
ನಿಕನಿಗೂ ಮಾರ್ಗದರ್ಶನವಾಗುವುದು. ಯಾವ ರೈತನಿಗೆ ಯಾವ
ಬಗೆಯ ಕೃತಕ ಗೊಬ್ಬರ ಬೇಕಾಗಿದೆ, ಅದು ಯಾವ ರೂಪದಲ್ಲಾತನಿಗೆ
ಸಿಗಬೇಕಾಗಿದೆ, ಎಂಬ ಬೇಡಿಕೆಯ ಸೂಕ್ಷ್ಮಗಳು ಫೋಸ್ಫೇಟ ತಯಾರಿ
ಸುವ ಉದ್ದಿಮೆದಾರರಿಗೂ ಗೊತ್ತಾಗಿ, ಅವರಿಗೆ ನಿರ್ದಿಷ್ಟವಾದ ಗುಣದ
ಗೊಬ್ಬರವನ್ನು ನಿಶ್ಚಿತವಾದ ಪ್ರಮಾಣದಲ್ಲಿ ತಯಾರಿಸಲು ಸಾಧ್ಯವಾಗು
ತ್ತದೆ. ಬೇಡಿಕೆಗೂ ಪೂರೈಕೆಗೂ ಹೆಚ್ಚು ಅಂತರ ಉಳಿಯುವುದಿಲ್ಲವಾದ್ದ
ರಿಂದ ಉತ್ಪಾದನೆಯಲ್ಲಿ ಅನಾವಶ್ಯಕ ನಷ್ಟದ ಪ್ರಸಂಗ ಕಡಮೆಯಾಗು
ವುದು. ಹೀಗೆ ಒಬ್ಬೊಬ್ಬರ ಸ್ವಾರ್ಥದಿಂದಲೂ ಇಡಿಯ ಪ್ರದೇಶದ ಪರಾ
ರ್ಥಸಾಧನೆಯಾಗುವುದನ್ನು ಕಾಣಬಹುದು.

ಸ್ವಾರ್ಥಶೋಧನೆಯಿಂದಲೇ ಪರೋಪಕಾರವು ಗಳಿಸುವುದನ್ನು
ಹೊಲದಲ್ಲಿ ಪ್ರದರ್ಶಕ ಕೇಂದ್ರಗಳ ನಿದರ್ಶನದಿಂದಲೂ ಸ್ಪಷ್ಟೀಕರಿಸ

ಬಹುದು. ಪ್ರದರ್ಶಕ ಕೇಂದ್ರದ ರಚನೆಯನ್ನು ಮೆಟ್ಟಲುಮೆಟ್ಟಲಾಗಿ ಗುರುತಿಸೋಣ. (೧) ಹೊಲದ ಯಾವಭಾಗದಲ್ಲಿ ಪ್ರದರ್ಶಕ ಕೇಂದ್ರಸ್ಥಾಪಿಸಬೇಕು? ಅಲ್ಲಿ ಏನಾಗಬೇಕು? ಎಂದು ವಿಚಾರಿಸುವುದು ಮೊದಲ ಪ್ರಶ್ನೆ. (೨) ಆ ಮೇಲೆ ನೆರೆಹೊರೆಯ ಸಹೋದ್ಯೋಗಿಗಳೊಡನೆ ಅಂದಾಜುಪಟ್ಟಿ ಮತ್ತು ನಕ್ಷೆಯ ಕುರಿತು ವಿಚಾರ ವಿನಿಮಯ ಮಾಡುವುದು. (೩) ಇಂತಹ ವಿಚಾರ ಮಂಥನದ ಫಲವಾಗಿ ಉಂಟಾದ ಹೊಸ ಆಡಳಿತೆಯ ಏರ್ಪಾಡನ್ನು ಇತರರ ಅನುಭವದ ಸಲುವಾಗಿ ಬರೆದಿಡುವುದು. (೪) ಈ ಹೊಣೆಯನ್ನು ಹೊತ್ತ ಸಲುವಾಗಿ ಆ ಪ್ರದರ್ಶಕ ರೈತನಿಗೆ ಮಣ್ಣಿನ ಸಾರಪಾಲನಾರ್ಥವಾಗಿ ಫೋಸ್ಫೇಟ ಗೊಬ್ಬರವು ಧರ್ಮಾರ್ಥವಾಗಿ ದೊರೆಯುವುದು. ಇದನ್ನು ಸಾರಪಾಲನೆಯ ಹೊರತಾಗಿ ಬೇರೆ ಯಾವ ಕಾರ್ಯಕ್ಕೂ ಉಪಯೋಗಿಸುವುದಿಲ್ಲವೆಂದು ರೈತವಾಗ್ದಾನ ಮಾಡತಕ್ಕದು. (೫) ಉಳಿದೆಲ್ಲ ಕೆಲಸಕ್ಕೂ ಆತನಿಗೆ ಟೀವೀಏಯ ಸಹಾಯ ದೊರೆಯಲಾರದು. ಜಾನುವಾರು ಸಂರಕ್ಷಣೆಗಾಗಲಿ, ಬೇಲಿಹಾಕುವುದಾಗಲಿ, ಯಂತ್ರಸರಬರಾಯಿಯಾಗಲಿ, ಎಲ್ಲವನ್ನು ಆತನೇ ಸ್ವತಃ ಮಾಡಿಕೊಳ್ಳಬೇಕು. ಇವಕ್ಕೆಲ್ಲ ಆತ ಉಪಯೋಗಿಸಬೇಕಾದ ಬಂಡವಲಿಗೆ ಆತನೆ ಸಂಪೂರ್ಣ ಹೊಣೆ. ಆದರೆ ಟೆನಸಿ ಕಂದರದಲ್ಲಿ ಈ ರೀತಿ ಬಂಡವಲು ವೆಚ್ಚಮಾಡಿದ ಒಟ್ಟು ೨೦,೦೦೦ ಪ್ರದರ್ಶಕ ರೈತರ ಪೈಕಿ ಯಾರಿಗೂ ನಷ್ಟಬರದೆ ಹೋದುದು ಒಂದು ರೀತಿಯಾಗಿ ನೋಡಿದರೆ ಆಶ್ಚರ್ಯ, ಇನ್ನೊಂದು ದೃಷ್ಟಿಯಿಂದ ನೋಡಿದರೆ ಬಹಳ ಸ್ವಾಭಾವಿಕ. ರೈತನಿಗಾದ ಲಾಭ ಬರೇ ಅವನದಲ್ಲ. ಅವನ ಯಶಸ್ಸಿನಿಂದ ಸ್ಫೂರ್ತಿಗೊಂಡ ಇತರ ಎಷ್ಟೋ ಹೊಲಗಳಿಗೆ ಆಗುವ ಅಪ್ರತ್ಯಕ್ಷ ಪರಿಣಾಮದ ಲೆಕ್ಕ ಇಡುವವರಿಲ್ಲ.

ರೈತನ ಸ್ವಾರ್ಥವೇ ಅವನ ಮೊದಲ ಚಿಂತೆ ನಿಜ. ಮೊತ್ತಮೊದಲು ಅವನ ಹೊಲದ ಒಳ್ಳಿತೇ ಅವನ ತಲೆಯಲ್ಲಿ ಸುಳಿದರೆ ಅದರಲ್ಲಿ ತಪ್ಪೇನು? ತನ್ನ ಕುಟುಂಬ ಇವುಗಳನ್ನು ಮೀರಿ ಆತ ಮೆಲ್ಲ ಮೆಲ್ಲಗೆ ತನ್ನ ನೆರೆಯವನ ಹಿತ, ಸ್ವಾರ್ಥಗಳ ಕಡೆಗೆ ಲಕ್ಷ್ಯಕೊಡುತ್ತಾನೆ. ಮೊದಲು ತನ್ನ ಹೊಲಗೆಲಸ, ಬಳಿಕ ಕಾಡ್ಗಿಚ್ಚಿನಿಂದ ರಕ್ಷಣೆ ಪಡೆಯುವುದಕ್ಕಾಗಿ ಸಾಮೂ

ಿಕ ಪ್ರವೃತ್ತಿ, ಆ ಮೇಲೆ ಶಾಲೆಯ ಸಹಾಯ, ಮತ್ತೆ ಸಾರ್ವಜನಿಕ ಆರೋಗ್ಯದ ಚಿಂತೆ, ಆ ಬಳಿಕ ಇಗರ್ಜಿಯ ಹಿತಸಾಧನೆ ಹೀಗೆ ರೈತನ ಕಾರ್ಯಕ್ಷೇತ್ರ ವಿಶಾಲವಾಗುತ್ತ ಹೋದಂತೆ ಅವನ ಸ್ವಾರ್ಥದ ಅಂಶ ಕುಸಿಯುತ್ತ ಅವನಲ್ಲಿ ಪರೋಪಕಾರಬುದ್ಧಿ ಸ್ವಾಭಾವಿಕವಾಗಿ ಜನಿಸು ವುದು. ಇದು ಟೆನಸಿ ಪ್ರದೇಶದ ಸರ್ವತೋಮುಖ ಬೆಳವಣಿಗೆ ಇಷ್ಟು ಕ್ಷಿಪ್ರದಲ್ಲೇ ಯಶಸ್ವಿಯಾದುದರ ಒಳಗುಟ್ಟು.

ವೆಸ್ಟ್‌ಪೈನ್ ಎಂಬೊಂದು ಹಳ್ಳಿಯ ಸಮಾಜದಲ್ಲಿ ಜಾನುವಾರು ಗಳ ಮಾಂಸ ಬೇಡಿಕೆಗೂ ಮೀರಿ ಬೆಳೆದು ಕೊಳೆಯಹತ್ತಿತು. ಆಗ ರೈತ ರಿಗೆ ಮಾಂಸವನ್ನು ದೀರ್ಘಕಾಲ ಉಳಿಸುವ ರಿಫ್ರಿಜರೇಟರಿನ ಆವಶ್ಯಕತೆ ಬಿತ್ತು. ಅವರು ತಮ್ಮ ಬೇಡಿಕೆಯನ್ನು ಟೀವೀಏ ಕೃಷಿತಜ್ಞರ ಮುಂದಿ ಟ್ಟಾಗ ಆ ಶಿಲ್ಪಿಗಳು ಅವರ ನಿರ್ದಿಷ್ಟವಾದ ಆವಶ್ಯಕತೆಗೆ ಸರಿದೂಗುವಂ ತಹದೇ ರಿಫ್ರಿಜರೇಟರನ್ನು ಅಗ್ಗವಾಗಿ ತಯಾರಿಸಿಕೊಟ್ಟರು. ಅದು ಪಟ್ಟಣಗಳಲ್ಲಿ ಕಾಣಸಿಗುವ 'ಫ್ಯಾಶನ್ನಿ'ನ ರಿಫ್ರಿಜರೇಟರ ಅಲ್ಲವಾದರೂ ರೈತರಿಗೆ ಅದೇ ಬೇಕಾಗಿದ್ದುದು. ಬೇಕಾಗಿದ್ದುದನ್ನೇ ಅವರು ತಯಾರಿಸಿ ದರು. ಇಂಥ ರಿಫ್ರಿಜರೇಟರು ವೆಸ್ಟ್‌ಪೈನ್ ಸಮಾಜದಲ್ಲಿ ಪ್ರಚಾರಕ್ಕೆ ಬಂದುದನ್ನು ನೋಡಿ ಸುತ್ತಲಿನ ಹಳ್ಳಿಯ ಜನಕೂಡ ತಾವು ಉಪಯೋ ಗಿಸಿ ಉಳಿದ ಮಾಂಸವನ್ನು ಸುರಕ್ಷಿತವಾಗಿ ಮಾರುವುದಕ್ಕೆ ರವಾನಿಸಲು ಈ ಸುಲಭ ತಯಾರಿಯ ರಿಫ್ರಿಜರೇಟರಿನ ಮರೆಹೊಕ್ಕರು. ಅಲ್ಲಿಂದ ಹೊಸ ರಿಫ್ರಿಜರೇಟರು ಟೆನಸಿ ಪ್ರದೇಶವೆಲ್ಲವೂ ಖ್ಯಾತಿ ಪಡೆಯುವಂತಾ ಯಿತು. ಅದರ ಉಪಕಾರದಿಂದ ಹಿಂದೆ ಕೊಳೆತು ಹಾಳಾಗುತ್ತಿದ್ದ ಆಹಾರ ಪದಾರ್ಥವು ಈಗ ಮಾರಾಟಕ್ಕೆ ಬರುವಂತಾಯಿತು.

ವಿದ್ಯುತ್ತಿನಿಂದಾದ ಪರಿಣಾಮವೂ ಹೀಗೆಯೆ. ವಿದ್ಯುತ್ತು ಬಂದೊ ಡನೆ ಮಣ್ಣಿನ ಸಾರರಕ್ಷಣೆಯ ಕೆಲಸ ಸುಗಮವಾದುದು ಹೇಗೆ ಗೊತ್ತೆ? ಚಿಕ್ಕಚಿಕ್ಕ ವಿದ್ಯುತ್ತಿನ ಮೋಟಾರು, ರಿಫ್ರಿಜರೇಟರು, ಹಾಲು ತಣಿಸುವ ಯಂತ್ರ, ನೀರುಕಾಯಿಸುವ ಉಪಕರಣ ಮುಂತಾದ ವಿದ್ಯುತ್ ಸಲಕರಣೆ ಗಳು ಬಂದೊಡನೆ ಹೊಲದ ಉತ್ಪತ್ತಿ ಹೆಚ್ಚಿತು. ಅಂದರೆ ರೈತನಿಗೆ ಹೆಚ್ಚು

ಹೆಚ್ಚು ಫೋಸ್ಫೇಟ್ ಮತ್ತು ಜಾನುವಾರು ಕೊಳ್ಳಲು ಹಣವುಳಿಯಿತು. ಫೊಸ್‌ಫೇಟ ಗೊಬ್ಬರಹಾಕಿ ಹೆಚ್ಚು ಹುಲ್ಲನ್ನೂ, ಚಳಿಗಾಲಕ್ಕೆ ಜಾನುವಾರುಗಳಿಗೆ ಬೇಕಾದ ಧಾನ್ಯಗಳನ್ನೂ ಬೆಳೆಯಿಸಬಹುದಷ್ಟೆ. ಹಾಗಾದಲ್ಲಿ ಹತ್ತಿಯಕಾಳಿನ ಬೆಳೆ ಕಡಮೆಯಾಗಿ, ಮಣ್ಣಿನ ಸಾರಪಾಲನೆಗನುವಾಗುವ ಹುಲ್ಲುಗರಿಕೆಗೂ, ದ್ವಿದಳಧಾನ್ಯಕ್ಕೂ ಪ್ರಾಧಾನ್ಯಬರುವುದು. ಇಂಥ ಸಾರಪಾಲನೆಯ ಕಾರ್ಯದಿಂದ ಇಡಿ ಪ್ರದೇಶದ ಏಳಿಗೆಯುಂಟೆಂಬುದನ್ನು ಈ ಮೊದಲೇ ವಿವರಿಸಿದ್ದೇವೆ.

ಪ್ರಕೃತ ತಿಳಿಯಬೇಕಾದುದಿಷ್ಟೆ. ವ್ಯಕ್ತಿಸಂಪೂರ್ಣವಾಗಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಲಾರ; ಸಮಷ್ಟಿಯೊಡನೆ ಹೇಳ ಹೆಸರಿಲ್ಲದಂತೆ ಬೆರೆಯಲಾರ. ಒತ್ತಾಯ ಪಡಿಸಿದರೆ ಆತ ಇತರರಿಗೆ ಉಪದ್ರವ ಕೊಡುವ ಹವ್ಯಾಸದಲ್ಲಿ ತನ್ನ ಸ್ವಾರ್ಥಕ್ಕೆ ಧಕ್ಕೆಯುಂಟಾಗುವುದನ್ನೂ ಲೆಕ್ಕಿಸುವುದಿಲ್ಲ. ಆದರೆ ಒಂದು ಕೆಲಸದಲ್ಲಿ ಅವನಿಗೂ ಸ್ವಾರ್ಥ ಉಂಟೆಂಬುದನ್ನು ತೋರಿಸಿಕೊಟ್ಟು, ಅವನದನ್ನು ಪ್ರತ್ಯಕ್ಷವಾಗಿ ಬೆಳೆಯಿಸಲು ಅವನಿಗೆ ಅವಕಾಶ ಒದಗಿಸಿ, ಆ ಮೇಲೆ ಬೇಕಾದರೆ ಅವನಿಂದ ಎಂಥ ಪರಾರ್ಥದ ಕೆಲಸವನ್ನಾದರೂ ಪುಕ್ಕಟೆಮಾಡಿಸಬಹುದು. ಆಗಾತನಿಗೆ ಸಮಷ್ಟಿಯ ಅಭ್ಯುದಯದಲ್ಲಿ ತಾನೂ ಪಾಲುಗಾರನೆಂಬ ಆನಂದದ ಹೆಮ್ಮೆಮೂಡಿ ಆತ ಮೆಲ್ಲಮೆಲ್ಲನೆ ಸ್ವಾರ್ಥವನ್ನು ಮರೆಯುವುದಕ್ಕೂ ಹಿಂಜರಿಯುವುದಿಲ್ಲ. ವ್ಯಕ್ತಿಯ ಸುಖವೇ ಸಮಾಜದ ಸುಖ; ವ್ಯಕ್ತಿಯನ್ನು ಬಿಟ್ಟು ಬೇರೆ ಸಮಾಜದ ಸುಖವೆಲ್ಲಿದ್ದೀತು? ಇದು ಪ್ರಜಾತಂತ್ರದ ಮರ್ಮ. ತನ್ನ ಸುಖಕ್ಕಾಗಿ ವ್ಯಕ್ತಿ ದುಡಿಯುತ್ತಿರುವಾಗಲೇ ಸಮಾಜದ ಒಟ್ಟು ಹಿತವೂ ಸಾಧಿಸುವಂತೆ ಅವಕಾಶವನ್ನು ಕಲ್ಪಿಸುವುದೇ ಪ್ರಜಾತಂತ್ರದ ಹೊಣೆಗಾರಿಕೆ.

ಇಂತು ವ್ಯಕ್ತಿಜೀವನ ಸಮಷ್ಟಿ ಜೀವನದೊಂದಿಗೆ ಸಮರಸವಾದಾಗಲೇ ಪರಿಶುದ್ಧ ಪ್ರಜಾತಂತ್ರದ ಚಿನ್ನದ ಬಾಗಿಲು ತೆರೆದು, ಅದರ ಆಂತರ್ಯದ ಪರಿಚಯವಾಗುವುದು.

## ಅಧ್ಯಾಯ ಎಂಟು.

## ರಾಷ್ಟ್ರಕಾರ್ಯದಲ್ಲಿ ವ್ಯಕ್ತಿಯ ವಿಕಾಸ.

ಟಿನಸಿ ಪ್ರದೇಶದ ಬೆಳವಣಿಗೆ ಒಂದು ರಾಷ್ಟ್ರೀಯ ಕಾರ್ಯಕ್ರಮ. ಫೆಡರಲ್ ಸರಕಾರದ ಪ್ರತಿಯೊಂದು ವಿಭಾಗವೂ ಅದರಲ್ಲಿ ಆಸಕ್ತಿಯಿಂದ ಸಹಕರಿಸುತ್ತದಾದರೂ ಕಂದರದಲ್ಲಿ ವಾಸಿಸುವ ಜನಗಳ ವೈಯಕ್ತಿಕ ಸಹಕಾರದಷ್ಟು ಮಹತ್ತ್ವ ಅದಕ್ಕಿಲ್ಲ. ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ ವ್ಯಕ್ತಿಯ ಶಕ್ತಿವಿಕಾಸಕ್ಕೆ ಆಸ್ಪದವಾಗುವುದೂ, ಬೇಕುಬೇಕಾದ ಸಂದರ್ಭಗಳನ್ನೊದಗಿಸುವುದೂ, ಪ್ರಜಾತಂತ್ರದ ಮುಖ್ಯ ಹಿರಿಮೆ. ಫೆಡರಲ್ ಸರಕಾರದ ಇಲಾಖೆಗಳು ಎಷ್ಟೇ ಮುತುವರ್ಜಿಯಿಂದ ಕೆಲಸ ಮಾಡಿದರೂ ಟಿನಸಿ ನಿವಾಸಿಯ ವೈಯಕ್ತಿಕ ವಿಕಾಸಕ್ಕೆ ಎಡೆಕೊಡದೆ ಹೋದಲ್ಲಿ, ಪ್ರದೇಶದ ಸರ್ವತೋಮುಖವಾದ ಬೆಳವಣಿಗೆ ಆಗಿದೆ ಎಂದು ಹೇಳಬರುವಂತಿಲ್ಲ. ದೊಡ್ಡ ಕೆಲಸದಲ್ಲಿ ತಾನು ಭಾಗವಹಿಸಿರುವೆನೆಂಬ ಆತ್ಮಸಂತುಷ್ಟಿ ಆತ್ಮೋನ್ನತಿಗೆ ಸಾಧಕವಾಗುವುದು.

ಟೀವೀಎ ಅಣೆಕಟ್ಟುಗಳನ್ನು ನಿರ್ಮಿಸಿದ ಕೆಲಸಗಾರರನ್ನು ಪರೀಕ್ಷಿಸೋಣ. ಏನಿಲ್ಲೆಂದರೂ ೧೯೩೩ರಿಂದ ಇಂದಿನ ವರೆಗೆ ಸುಮಾರು ಎರಡುಲಕ್ಷ ಕೆಲಸಗಾರರು ದುಡಿದಿದ್ದಾರೆ. ಒಂದೇ ಬಗೆಯ ಕೆಲಸವಲ್ಲ-ನೂರಾರು ಬಗೆಯ ಕೆಲಸ. ಹೆಚ್ಚಿನವರು ಟಿನಸಿ ಪ್ರದೇಶದ ನಿವಾಸಿಗಳೇ-ಬಡಗಿಗಳು, ಫಿಟ್ಟರುಗಳು, ಕಲ್ಲುಕಡಿಯುವವರು, ಮರಸಿಗಿಯುವವರು, ಗಾರೆಯವರು-ಹೀಗೆ ಅರುವತ್ತನಾಲ್ಕು ಕಲೆಗಳಿಗೂ ಟೀವೀಎ ಅಣೆಕಟ್ಟುಗಳು ಅವಕಾಶ ಒದಗಿಸಿವೆ. ನೆರೆ ನಿಯಂತ್ರಣದ ಮಹಾಕಾರ್ಯದಲ್ಲಿ ಈ ಒಂದೊಂದು ಬಗೆಯ ಕೆಲಸಗಾರರಿಗೂ ಮಹತ್ತ್ವದ ಸ್ಥಾನ ಉಂಟು. ಇವರಲ್ಲಿ ಹಲವರು ಒಂದು ಅಣೆಕಟ್ಟಿನ ನಿರ್ಮಾಣ ಮುಗಿದೊಡನೆ ತಮ್ಮ ಸಾಮಾನು ಸರಂಜಾಮುಗಳೊಡನೆ ಇನ್ನೊಂದರ ಠಾಣಕ್ಕೆ ವಲಸೆ ಹೋದವರು. ಅಂಥವರ ಮಕ್ಕಳು ತಂತಮ್ಮ ತಾಯ್ತಂದೆಗಳ ನೇತೃತ್ವದಲ್ಲೆ ತರಬೇತಿಹೊಂದಲು ಸುಲಭವಾಯಿತು. ತರಬೇತಿ ಮುಗಿಸಿ ಮಗ ಫೋರ್‌ಮ್ಯಾನ್ ಆದನೆಂದರೆ ಹೆತ್ತವರಿಗೆಷ್ಟು ಸಂತೋಷ! ತಂದೆ

ಉಪ್ಪಾರನಾಗಿದ್ದರೂ ಮಗ ಉಪ್ಪಾರರಿಂದ ಕೆಲಸಮಾಡಿಸುವ ಫೋರ್ ಮ್ಯಾನ್, ಅಥವಾ ಯಂತ್ರಜ್ಞನಾದರೆ ತಂದೆಗೆ ಹಿಡಿಸಲಾರದಷ್ಟು ಸಂತೋಷವಾಗುವುದು ಸಹಜವೇ. ಟೀವೀಏ ಕೆಲಸಕ್ಕೆ ಸೇರಿದರೆ ಈ ಬಗೆಯ ಅಪ್ರತ್ಯಕ್ಷ ಸವಲತ್ತುಗಳು ಸಿಗುವುದರಿಂದ ಮಜೂರರು ಬರಿಯ ಕೂಲಿಯದರದ ಕಡೆಗೆ ಮಾತ್ರ ಕಣ್ಣಿಡುವುದಿಲ್ಲ. ಇಡಿ ಪ್ರದೇಶದ ಬೆಳವಣಿಗೆಯಾದ ಪಕ್ಷಕ್ಕೆ ತಮ್ಮ ಕುಟುಂಬಕ್ಕೂ ಲಾಭವುಂಟೆಂಬುದನ್ನರಿತಿರುವುದರಿಂದ, ಅವರು ಕೂಲಿಯ ಕುರಿತು ಛಲ ಮಾಡುವುದಿಲ್ಲ. ಒಮ್ಮೊಮ್ಮೆ ಟೀವೀಏಯ ಸ್ವಾರ್ಥವೇ ಈ ಜನದ ಮುಖ್ಯ ಸ್ವಾರ್ಥವೆಂದು ತೋರುವಷ್ಟು ದೂರ ಟೀವೀಏ ಕೆಲಸಗಾರರು ಮುಂದುವರಿದಿದ್ದಾರೆ.

ಮಜೂರರು ಮಾಡುವ ಕೆಲಸ ಕ್ಷುಲ್ಲಕವಾದುದಲ್ಲ, ಟೆನಸಿಯ ಸಾರ್ವತ್ರಿಕ ಅಭ್ಯುದಯಕ್ಕೆ ನೆರವಾಗುವ ಯಾವ ಚಿಲ್ಲರೆ ಕೆಲಸವೂ ಕ್ಷುಲ್ಲಕವಾಗಲಾರದು, ಎಂಬ ಅಭಿಪ್ರಾಯವನ್ನು ಮಜೂರರಿಗೆ ಟೀವೀಏ ಅಧಿಕಾರಿಗಳು ಕಾರ್ಯತಃ ತೋರಿಸುತ್ತಿರುವುದರಿಂದ, ಈ ಬಗೆಯ ಮಾಲಕ-ಮಜೂರ ಸೌಹಾರ್ದ ಬೆಳೆಯಲು ಕಾರಣವಾಗಿದೆ. ಅಲ್ಲದೆ ಲಿಖಿತ ಪರೀಕ್ಷೆಯೊಂದನ್ನು ೧೭೫ ತಾಲೂಕುಗಳಲ್ಲಿ ನಡೆಸಿ ನ್ಯಾಯಪೂರ್ವಕವಾದ ಯೋಗ್ಯತೆಯ ಮೇಲಿಂದಲೇ ಕೆಲಸಗಾರರನ್ನಾರಿಸುವ ಪರಿಪಾಟ ಈ ವರೆಗೆ ಯಾರು ಮಾಡಿದ್ದಾರೆ? ನೋರಿಸ್ ಅಣೆಕಟ್ಟು ನಿರ್ಮಿಸುವ ಮೊದಲು ನಡೆಸಿದ ಪರೀಕ್ಷೆಗೆ ಕೂಡಲು ಒಟ್ಟು ೩೮೦೦ ಜನ ಬಂದರು. ಕೆಲವರು ಬೆಟ್ಟಗಳಲ್ಲಿನ ತಮ್ಮ ಹೊಲಗದ್ದೆಗಳನ್ನು ಮನೆಯಲ್ಲಿನ ಇತರರಿಗೆ ಬಿಟ್ಟುಗೊಟ್ಟು ಪರೀಕ್ಷೆಗೆ ಬಂದರು; ಇನ್ನು ಕೆಲವರು ಕಲ್ಲಿದ್ದಲಿನ ಗಸಿಯಿಂದಲೂ, ಬಯಲುನಾಡಿನ ಪಟ್ಟಣಗಳಿಂದಲೂ ಚಿತ್ತೈಸಿದರು. (೧) ಲಿಖಿತ ಪರೀಕ್ಷೆ ಇರುವುದರಿಂದ ವಸೀಲಿಯ ಜೋರು ನಡೆಯಲಾರದೆಂದು ಅವರಿಗೆ ದೃಢವಾದ ನಂಬುಗೆ. ಆರಿಸಲ್ಪಟ್ಟ ಕೆಲಸಗಾರರು ತಾವಾಗಿ ತರಬೇತಿ ಬೇಕೆಂದು ಟೀವೀಏಗೆ ಬಿನ್ನವಿಸಿಕೊಂಡರು. ನೋರಿಸ್ ಮುಗಿದ ಬಳಿಕ ಇನ್ನೂ ಎಷ್ಟೋ ಆಣೆಕಟ್ಟುಗಳ ನಿರ್ಮಾಣ ನಡೆಯುವುದೆಂದವರಿಗೆ ಗೊತ್ತಿಲ್ಲವೆ? (೨) ಕೆಲಸಗಾರರು ಕೆಲಸಕ್ಕಿಳಿಯುವ ಸ್ಫೂರ್ತಿಯನ್ನು ನೋಡಿದರೆ ಏನೋ ಒಂದು ಮಹತ್ತ್ವದ ಘಟನೆ

ನಡೆಯಬೇಕಾದ್ದಿದೆ ಎಂದೂ, ಅದು ಇವರ ಸಹಯೋಗದಿಂದಲೇ ನಡೆಯುವುದೆಂದೂ, ಸ್ಪಷ್ಟವಾಗುವುದು. (೩) ಟೇವೀಏ ಟೆನಸಿ ಪ್ರದೇಶದ ಪ್ರಕೃತಿಯ ವಿರುದ್ಧ ನಡೆಯಿಸುತ್ತಿರುವ ಹೋರಾಟದಿಂದ ಮಜೂರರ ಹಿತ ಸಾಧನೆಯಾಗುವುದರಿಂದ, ಚಿಕ್ಕ ಚಿಕ್ಕ ಬಿಕ್ಕಟ್ಟುಗಳಿಗೆ ಎಡೆ ಇಲ್ಲವೆಂದು ಮಜೂರ ಮುಂದಾಳುಗಳೂ ಅರಿತಿದ್ದಾರೆ. ಟೆನಸಿ ಪ್ರದೇಶದ ಮಜೂರರ ಉನ್ನತಿಗೆ ಬಾಧಕವಾದ ಈ ವೈರಿಶಕ್ತಿಗಳು ಪಲಾಯನಮಾಡುತ್ತಿರುವ ಸಮಯ ಅಡ್ಡಿಯಾಗುವುದು ವಿಹಿತವಲ್ಲವೆಂದು ಸಮಾಧಾನವನ್ನು ತಾಳಿರುವ ಮಜೂರ ವರ್ಗವನ್ನು ಎಷ್ಟು ಹೊಗಳಿದರೂ ಅಲ್ಪವೇ. (೪) ಕೊನೆಯದಾಗಿ ಟೇವೀಏ ತಾವು ಬರೇ ಕೆಲಸಮಾಡುವ ಜಾಗವಲ್ಲ, ತಮ್ಮ ಮತ್ತು ತಮ್ಮ ಮಕ್ಕಳ ಜೀವನದ ಸರ್ವಸ್ವವೆಂದು ಅವರು ಪರಿಗಣಿಸುತ್ತಿದ್ದಾರೆ. (೫) ಟೇವೀಏಯ ಮಜೂರ ನಾಯಕರೆಂದರೆ ಬೇಜವಾಬುದಾರಿ ಜನರಲ್ಲ; ಮಾಲಕರಿಗೂ, ಮಜೂರರಿಗೂ ಜಗಳ ಕಾಯಿಸುವುದೊಂದೇ ತಮ್ಮ ವೃತ್ತಿ ಎನ್ನುವವರಲ್ಲ. ಉದಾ:-ಒಬ್ಬ ಮಜೂರ ಮುಂದಾಳು ತನ್ನ ಪ್ರಾಂತ್ಯದ ಯುದ್ಧೋತ್ತರ ಪುನರ್-ರಚನಾ ಸಮಿತಿಯ ಸದಸ್ಯನಾಗಿದ್ದಾನೆ. ಇನ್ನೊಬ್ಬ ಮಜೂರ ಫೆಡರೇಶನ್ನಿನ ಅಧ್ಯಕ್ಷತನ ವಹಿಸಿದ್ದಾನೆ. ಈ ಎಲ್ಲ ಹುದ್ದೆಗಳಲ್ಲಿ ಬೇಜವಾಬುದಾರಿತನಕ್ಕೆ ಎಡೆಯಿಲ್ಲವಷ್ಟೆ. ಒಟ್ಟು ಪ್ರದೇಶದ ಬೆಳವಣಿಗೆಯೇ ಇವರ ಗುರಿಯಾಗಿರುವುದರಿಂದ ಸಂಕುಚಿತ ಮನೋವೃತ್ತಿ ಅವರ ಮೇಲ್ಮೆಗೆ ಯೋಗ್ಯವಲ್ಲವೆಂದು ಅವರದನ್ನು ತೊರೆದು ಟೆನಸಿಪ್ರದೇಶದ ವಿಶಾಲವಾದ ಆದರ್ಶಗಳ ಸಾಧನೆಯಲ್ಲಿ ಮಗ್ನರಾಗಿರುವರು.

ಮಜೂರ ಜಗತ್ತಿನಿಂದ ಉದ್ದಿಮೆದಾರರ ಲೋಕಕ್ಕೆ ಕಾಲಿಡೋಣ. ಟೇವೀಏಯ ಮಹೋದ್ದೇಶದ ಪರಿಜ್ಞಾನ ಉದ್ದಿಮೆದಾರರಿಗೂ ಇದ್ದೇ ಇದೆ, ಲಾಭದ ಮೇಲೆ ಮಾತ್ರ ಅವರ ಕಣ್ಣಲ್ಲ, ಎಂಬುದು ನಮಗೆ ಮೊತ್ತ ಮೊದಲು ಕಾಣುವ ವಿಷಯ. ಟೆನಸಿ ಪ್ರದೇಶದ ಸಾಧನಸಂಪತ್ತಿನಲ್ಲಿಯೂ, ಜನವರ್ಗದಲ್ಲಿಯೂ ಕಂಡುಬರುವ ಮತ್ತು ಬರಬೇಕಾದ ಐಕ್ಯದ ಎಚ್ಚರ ಉದ್ದಿಮೆದಾರರಿಗೂ ಮೂಡಿರುವುದನ್ನು ಲಕ್ಷ್ಯಕ್ಕೆ ತರಬೇಕು. ಖಾಸಗಿ ಉದ್ದಿಮೆದಾರರು ಕೂಡ ಟೇವೀಏಯ ಅನುಭವಕ್ಕೆ ಮನ್ನಣೆ

ಕೊಡುತ್ತಾರೆ. ಟೀವೀಏಗೆ ತಾವು ಚಿರಋಣಿಗಳೆಂಬುದನ್ನು ಆಗಾಗ ಸಾರುತ್ತಾರೆ. ಟೀವೀಏ ವರದಿಗಳನ್ನು ಕೂಲಂಕಷವಾಗಿ ಚರ್ಚಿಸಿಯೇ ಸ್ವತಂತ್ರ ನಿರ್ಧಾರಕ್ಕೆ ಬರುತ್ತಾರೆ: (೧) ಒಮ್ಮೆ ಒಂದು ಮರದ ಕಾರ್ಖಾನೆಗೆ ಳಜಮಿಲಿಯ ಗೆಲನು ನೀರಿನಲ್ಲಿನ ಕಲ್ಮಷವನ್ನು ತೆಗೆಯುವ ಆವಶ್ಯಕತೆ ಬಿತ್ತು. ಯಾವುದಾದರೂ ಒಂದು ವಿಧಾನದಿಂದ ತಮಗೆ ಬೇಕಾಗುವಷ್ಟೆ ಕಷ್ಮಲವನ್ನು ತೆಗೆದು ಉದ್ದಿಮೆದಾರರು ತೆಪ್ಪಗಿರಬಹುದಿತ್ತು. ಆದರೆ ಅವರು ಹಾಗೆಮಾಡದೆ, ಮಣ್ಣಿನ ಸಾರಪಾಲನೆಯ ಇಲಾಖೆಗೆ ನೆರವಾದರು. ಪ್ರದರ್ಶಕಕೇಂದ್ರಗಳಿಗೆ ಆರ್ಥಿಕ ಸಹಾಯ ನೀಡಿದರು. ಅವರ ಜಲಾಶಯದ ನೀರಿಗೆ ಕಷ್ಮಲ ಬೀಳದಂತೆ ಮೂಲದಲ್ಲಿಯೇ ಏರ್ಪಾಡು ನಡೆಸಿದರು. (೨) ಮರದ ಸಾಮಾನುಗಳನ್ನು ತಯಾರಿಸುವ ಉದ್ಯಮವೊಂದು ತಾನು ತಯಾರಿಸುವ ವಿಶಿಷ್ಟ ಬಗೆಯ ಉಪಕರಣಕ್ಕೆ ತಕ್ಕುದಾದ ಮರವೆಲ್ಲಿದೆ? ಅದೆಷ್ಟು ಕಾಲದ ವರೆಗೆ ಬಂದೀತು? ಎಂಬುವದನ್ನು ತಿಳಿಯಲು ಟೀವೀಏ ಅಧಿಕಾರಿಗಳ ಬಳಿಸಾರಿತು. ಟೀವೀಏ ಅಧಿಕಾರಿಗಳು ಎಲ್ಲೆಲ್ಲಿ ಎಷ್ಟೆಷ್ಟು ಮರ ಉಂಟು? ಆ ಮರವನ್ನು ಪಯೋಗಿಸುವ ಉದ್ಯಮಗಳು ಈಗಾಗಲೇ ಎಷ್ಟಿದ್ದಾವೆ? ಅವುಗಳ ನಡುವೆ ಹೊಸ ಉದ್ಯಮದ ಭವಿಷ್ಯವೇನು? ಇತ್ಯಾದಿ ಎಲ್ಲ ವಿಚಾರಗಳನ್ನೂ ಒಳಗೊಂಡ ಒಂದು ವರದಿಯನ್ನೊಪ್ಪಿಸಿದರು. ಉದ್ದಿಮೆದಾರರಿಗೆ ಈ ವರದಿಯ ಮೇಲಿಂದ ಹೊಸ ಉಪಕರಣದ ತಯಾರಿಗೆ ತೊಡಗಬೇಕೆ? ಬೇಡವೇ? ಎಂದು ನಿರ್ಧರಿಸುವುದು ಸುಲಭವಾಯಿತು. (೩) ಟೆನಸಿನದಿಯಲ್ಲಿ ಜಲಸಂಚಾರದ ಅನುಕೂಲಕ್ಕಾಗಿ ಕೊನೆನಿಲುಮನೆಗಳನ್ನು ಕಟ್ಟಿದಾಗಲೂ ಇದೇ ಬಗೆಯ ಟೀವೀಏ-ಉದ್ದಿಮೆದಾರ ಸಂಪರ್ಕ ವೃದ್ಧಿಗೊಳ್ಳಲು ಅವಕಾಶ ಉಂಟಾಯಿತು. ಈ ವರೆಗೆ ಟೆನಸಿ ನದಿಯ ಜಲಮಾರ್ಗವು ದೊಡ್ಡದೊಡ್ಡ ಉದ್ದಿಮೆದಾರರಿಗೆ ಮಾತ್ರ ಉಪಯೋಗಕ್ಕೆ ಬೀಳುತ್ತಿತ್ತು. ಚಿಕ್ಕ ಚಿಕ್ಕ ಕೊನೆನಿಲುಮನೆಗಳಿಲ್ಲದಿದ್ದುದರಿಂದ ಟೆನಸಿಯ ಚಿಕ್ಕ ಉದ್ದಿಮೆದಾರರು ತುಂಬಾ ಪಾಡುಪಡಬೇಕಾಗುತ್ತಿತ್ತು. ಆದರೆ ಒಂದು ಸಲ ಈ ಚಿಕ್ಕ ಉದ್ದಿಮೆದಾರರಿಗೆ "ಒಗ್ಗಟ್ಟಿನಲ್ಲಿ ಬಲವಿದೆ" ಎಂಬ ಗಾದೆ ನೆನಪಾಯಿತೇನೋ, ಎಲ್ಲರೂ ಒಂದೆಡೆ ಸಮ್ಮೇಳನ ಸೇರಿ

ಸಿದರು. ಟೀವೀಏ ತಜ್ಞರಿಂದ ಜಲಸಂಚಾರ ಸಂಪೂರ್ಣ ಮಾಹಿತಿ ಪಡೆ ದುಕೊಂಡು ಚಿಕ್ಕ ಉದ್ದಿಮೆಗಳಿಗೆ ಅವಶ್ಯವಾದ ಕೊನೆನಿಲುಮನೆಗಳನ್ನು ನಿರ್ಮಿಸಬೇಕೆಂದು ಟೀವಿಏಗೆ ಬಿನ್ನವಿಸಿಕೊಂಡರು. ಅಂಥ ಕೊನೆನಿಲು ಮನೆಗಳು ಸಾರ್ವಜನಿಕ ಉಪಯೋಗಕ್ಕೆ ಒಳನಾಡಿನ ಜಲಮಾರ್ಗ ವೊಂದರಲ್ಲಿ ಉಂಟಾದುದು ಪ್ರಪಂಚದಲ್ಲೇ ಮೊದಲಬಾರಿ. ರೈಲು ಹಾದಿಯನ್ನೂ ಈ ಕೊನೆ ನಿಲುಮನೆಗಳಿಗೆ ತಂದು ಜೋಡಿಸಿದುದರಿಂದ ನದಿಯ ದಂಡೆಯಿಂದ ದೂರದಲ್ಲಿರುವ ಉದ್ದಿಮೆಗಳಿಗೂ ಸಾರ್ವಜನಿಕ ಲಾಭ ದೊರೆಯುವಂತಾಯಿತು.

ಖಾಸಗಿ ಉದ್ದಿಮೆಗಳು ಸಾರ್ವಜನಿಕ ಲಾಭಕ್ಕೆ ಅನುವಾದಾವೆ? ಖಾಸಗಿ ಉದ್ದಿಮೆಗಳ ಸ್ಥಾನಮಾನವೇನು? ಎಂಬುದು ದ್ವಿತೀಯ ಮಹಾ ಯುದ್ಧಾನಂತರದ ಮುಖ್ಯ ಪ್ರಶ್ನೆಗಳಲ್ಲೊಂದಾಗಿದೆ. ಖಾಸಗಿ ಉದ್ದಿಮೆ ಗಳಿಗೂ, ಸಾರ್ವಜನಿಕ ಉಪಕಾರಕ್ಕೂ ಹುಟ್ಟು ವೈಷಮ್ಯವಿದೆಯೆ? ಎಂದು ನಾವು ವಿಚಾರಿಸಿದರೆ ಸಾಮ್ರಾಜ್ಯಶಾಹಿಯ ಯುಗದಲ್ಲಿ ಅಂಥ ವೈಷಮ್ಯ ಖಂಡಿತವಾಗಿಯೂ ಬೆಳೆಯಿತೆಂದು ಹೇಳಬಹುದಾಗುತ್ತದೆ. ಸಾಮ್ರಾಜ್ಯಶಾಹಿ ನೆತ್ತರು ಹೀರಿದ ಒಂದು ಪ್ರದೇಶವನ್ನೇ ಆರಿಸೋಣ: ಅಮೆಝೋನ್ ನದೀಪಾತ್ರದ ರಬ್ಬರಿನ ಕಾಡು, ಖಾಸಗಿ ಉದ್ದಿಮೆದಾರ ರುಂಡರ ತಂಡ ಅಮೆಝೋನ್ ಕಾಡನ್ನು ಪಿಡುಗುಹೊಕ್ಕಂತೆ ಪ್ರವೇಶಿಸಿ ದುದೇ ತಡ, ಅಲ್ಲಿಯ ಮೂಲನಿವಾಸಿಗಳು ನಿಧಾನವಾಗಿ ನಿರ್ನಾಮವಾ ಗುತ್ತಾ ಬಂದರು. ಇದ್ದ ರಬ್ಬರಿನ ರಸವನ್ನು ತೆಗೆದು ಕಚ್ಚಾರಬ್ಬರು ತಯಾರಿಸಿ ಕರಾವಳಿಯ ಬಳಿ ವರ್ತಕರಿಗೆ ಮಾರಿ ಹೊಟ್ಟೆ ಹೊರೆಯು ತ್ತಿದ್ದ ಅಮೆಝೋನ್ ನಿವಾಸಿಗಳಿಗೆ, ಬಿಳಿಯರ ಹೊಸ ಉಪಕರಣಗಳು ಶತ್ರುವಾದುವು. ಬೇಗಬೇಗನೆ ಅತಿಹೆಚ್ಚು ಪ್ರಮಾಣದಲ್ಲಿ ರಬ್ಬರು ಹಿಂಡುವ ಈ ಉಪಕರಣಗಳು ಕೆಲವೇ ತಿಂಗಳುಗಳಲ್ಲಿ ಒಂದು ಪ್ರದೇಶ ವನ್ನು ಬರಿದುಮಾಡಿ, ಪೈರು ಮೇಯುವ ಹುಳದಂತೆ ಮುಂದಿನ ಪ್ರದೇ ಶಕ್ಕೆ ತೆರಳುವವು. ಆ ಪ್ರದೇಶವನ್ನು ಬರಿದುಮಾಡಿದ ಬಳಿಕ ಅಲ್ಲಿಯ ಜನರ ಗತಿ ಏನಾಗಬೇಕು? ಅವರು ಹೇಗೆ ಹೊಟ್ಟೆ ಹೊರೆಯಬೇಕು? ಎಂಬ ಚಿಂತೆ ಖಾಸಗಿ ಉದ್ದಿಮೆದಾರನನ್ನೇಕೆ ಬಾಧಿಸೀತು? ಹೀಗೆ

ಅಮೆರಿಕೋನ್ ಇಂಡಿಯಾನರ ಮುಖ್ಯ ಜೀವನ ನಿರ್ವಾಹಕ್ಕೆ ವಿಘ್ನವುಂಟಾಗಿ ಅವರ ಸಮಾಜ ಬರ ಬರುತ್ತ ವಿನಾಶದ ಹಾದಿಹಿಡಿಯಿತು. ಇದಕ್ಕೆ ಖಾಸಗಿ ಉದ್ದಿಮೆಯ ಕ್ರೌರ್ಯವೇ ಕಾರಣವಲ್ಲವೇ?

ಖಾಸಗಿ ಉದ್ದಿಮೆ ಇಷ್ಟು ಸ್ವಾರ್ಥಪರವಾಗಲು ಕಾರಣ ಅದಕ್ಕೆ ದುಡ್ಡು ಮಾಡುವುದೊಂದರ ಹೊರತು ಬೇರೆ ಉದ್ದೇಶವೇ ಇಲ್ಲದೆ ಇದ್ದುದು ಟೀವೀಏಯಂತಹ ಮಹೋದ್ದೇಶವನ್ನು ಕಟ್ಟಿಕೊಂಡಿದ್ದರೆ ಜನಜೀವನದ ಆರೈಕೆಗದು ಯತ್ನಿಸುತಿತ್ತು. ಜನಹಿತದ ದೃಷ್ಟಿಯು ಲವಲೇಶವಾದರೂ ಇದ್ದಿದ್ದರೆ ಖಾಸಗಿ ಉದ್ದಿಮೆದಾರರು ಮೂಲನಿವಾಸಿಗಳ ನೆತ್ತರುಹಿಂಡಲು ಮನಸ್ಸು ಮಾಡುತ್ತಿದ್ದರೆ? ಸರ್ವಥಾ ಇಲ್ಲ. ಫೋಸ್‌ಫೇಟ ಗೊಬ್ಬರದ ತೀಕ್ಷ್ಣತೆಯನ್ನು ಹೆಚ್ಚಿಸಿದರೆ ಹೊಲಕ್ಕೆ ಗೊಬ್ಬರವನ್ನು ಸಾಗುಮಾಡುವ ವೆಚ್ಚ ಕಡಮೆಯಾಗುವುದೆಂದು ಅಂಥ ತೀಕ್ಷ್ಣಗೊಬ್ಬರ ಬೇಕೆಂದು ಟೀವೀಏ ರೈತಹೇಳಿದ್ದೇ ತಡ, ಖಾಸಗಿ ಉದ್ದಿಮೆದಾರರು ಅವರ ಆವಶ್ಯಕತೆಯನ್ನು ನೆರವೇರಿಸಿದರು. ಖಾಸಗಿ ಉದ್ದಿಮೆಯೂ ಜನರೂ ಒಂದೆರಕದಲ್ಲಿರುವುದರಿಂದಲೇ ಟೆನಸಿ ಪ್ರದೇಶದಲ್ಲಿ ಸಂಯುಕ್ತ ರಾಷ್ಟ್ರಕ್ಕಿಂತ ಐದುಪಾಲು ಹೆಚ್ಚು ಫೋಸ್‌ಫೇಟ ಉಪಯೋಗಿಸಲ್ಪಡುತ್ತಿರುವುದು. ಇನ್ನೊಂದು ನಿದರ್ಶನ: ಸ್ಟ್ರಾಬೆರಿ ಗಿಡ ಮಣ್ಣಿನ ಸಾರ ಪಾಲನೆ ಮಾಡುವುದಕ್ಕೆ ಯೋಗ್ಯವಾದುದು. ಆದರೆ ಸ್ಟ್ರಾಬೆರಿ ಹಣ್ಣಿನ ಬೆಳೆ ಲಾಭ ಕೊಡಬೇಕಾದರೆ ಹಣ್ಣಾದ ಸ್ಟ್ರಾಬೆರಿಯನ್ನು ಒಮ್ಮೆಲೆ ಹಾಕುವ ಪ್ರಸಂಗ ಬರಬಾರದು. ಒಂದೇ ಕಾಲಕ್ಕೆ ಹೀಚುಬಿದ್ದು ಒಂದೇ ಕಾಲಕ್ಕೆ ಹಣ್ಣಾಗುವ ಬೆಳೆ, ಸಾರಪಾಲನೆಗದೆಷ್ಟೇ ಆವಶ್ಯಕವಾಗಿದ್ದರೂ, ಮಾರ್ಕೆಟ್ಟಿಗೆ ಬರದಂತೆ ತಡೆದು ನಿಲ್ಲಿಸುವುದು ಹೇಗೆಂದು ಎಲ್ಲ ರೈತರೂ ಪೇಚಾಡುತ್ತಿದ್ದವೇಳೆ, ಖಾಸಗಿ ಉದ್ದಿಮೆದಾರರು ಅಗ್ಗವಾದ ರಿಫ್ರಿಜರೇಟರು ತಯಾರಿಸಿ ಕೊಡುತ್ತೇವೆಂದು ತಾವಾಗಿ ಮುಂದೆ ಬಂದರು. ಸ್ಟ್ರಾಬೆರಿ ಬೆಳೆಯುವ ರೈತಜನ ಅವರನ್ನು ಸ್ವಾಗತಿಸಿದರು. ಇಂಥ ಮಿಳನದ ಫಲವಾಗಿ ಸ್ಟ್ರಾಬೆರಿ ಉದ್ಯೋಗ ಬೆಳೆಯಿತು; ರೈತಜನಕ್ಕೆ ಲಾಭವಾಯಿತು. ರಿಫ್ರಿಜರೇಟರು ತಯಾರಿಸುವ ಉದ್ಯಮಕ್ಕೆ ಹೊಸದೊಂದು ಮಾರ್ಕೆಟ್ಟು ಬಲಗೊಂಡಿತು. ಮುಖ್ಯವಾಗಿ ಇಂಥ ಎರಡು ಸ್ವಾರ್ಥ

ಗಳ ಐಕ್ಯದಿಂದ ಸಾರಸಾಲನೆಯೆಂಬ ಮುಖ್ಯವಾದ ಪರಾರ್ಥವು ಸಿದ್ಧಿಸಿತು.

ವ್ಯಕ್ತಿತ್ವದ ವಿಕಾಸದಲ್ಲಿ ತಜ್ಞರ ಮತ್ತು ಅಜ್ಞರ ನಡುವಿನ ಸಂಬಂಧ ವಿಶೇಷಕ್ಕೆ ತುಂಬಾ ಪ್ರಾಧಾನ್ಯವುಂಟು. ಪ್ರಜಾತಂತ್ರದ ಹಾದಿಯಲ್ಲಿ ಇಬ್ಬರೂ ಸಮಾನ ಹಕ್ಕಿನ ದಾರಿಹೋಕರು. ಅಜ್ಞರಿಗೆ ತಜ್ಞರ ನೆರವು ಬೇಕಾದೊಡನೆ ತಜ್ಞರು ಅಜ್ಞನರನ್ನು ಹೀಯಾಳಿಸುವ ಹವ್ಯಾಸಕ್ಕೀಳಿಯ ಲಾಗದು. ಆಧುನಿಕ ಉತ್ಪಾದನಾಕ್ರಮದಲ್ಲಿ ತಜ್ಞರಿಲ್ಲದೆ ಗತ್ಯಂತರವೇ ಇಲ್ಲವೆಂಬುದನ್ನು ಅಜ್ಞನೂ ಬಲ್ಲನಾದುದರಿಂದ ಅವನು ಉದ್ದೇಶ ಪೂರ್ವಕವಾಗಿ ತಜ್ಞರು ಹಾಕಿಕೊಟ್ಟ ಗೆರೆಯನ್ನು ದಾಟಲಾರ; ಅವರ ಮಾತನ್ನು ಮೀರಲಾರ. ಎಂದೊಡನೆ ಅವನು ತಜ್ಞರ ಕೈಗೊಂಬೆಯಾದನೆಂದರ್ಥವಲ್ಲ; ತಜ್ಞರು ತಮ್ಮ ಹಿರಿಮೆಯ ಪಟ್ಟದಿಂದ ಘೋಷಣೆ ಹೊರಡಿಸಬೇಕೆಂದೂ ಅರ್ಥವಲ್ಲ. ಅವರಿಬ್ಬರೊಳಗೆ ಇರುವ ನಂಟುತನಕ್ಕೆ ಸೌಹಾರ್ದದ ಮಿರುಗಿರಬೇಕು; ನಯವಿನಯದ ಭಯ ವಿರಬೇಕು. ಆಗ ಮಾತ್ರ ತಜ್ಞಅಜ್ಞ ಗೆಳೆತನದಿಂದ ಸತ್ಫಲವು ಉದಿಸೀತು.

ಈ ಬಗೆಯ ಪರಸ್ಪರ ನಂಟು ಬೆಳೆಯಬೇಕಾದರೆ ಕೆಳಗಿನ ಪ್ರಾಮುಖ್ಯ ಸಂಗತಿಗಳನ್ನು ಗಮನಕ್ಕೆ ತರಬೇಕು: (೧) ತಜ್ಞರು ಅಜ್ಞರ ಜತೆಗೆನೆ ಸಾಧ್ಯವಾದಷ್ಟು ಹತ್ತಿರದಲ್ಲಿ ಮನೆಮಾಡಿಕೊಂಡಿರ ತಕ್ಕುದು. ರೈತನ ದಿನನಿತ್ಯದ ಕೋರಿಕೆಗಳು ತಜ್ಞನಿಗೆ ಅರ್ಥವಾಗಿ, ತಜ್ಞನ ಕಷ್ಟ ನಿಷ್ಠುರಗಳು ರೈತನಿಗೆ ಅರ್ಥವಾಗಬೇಕಾದರೆ ಇಬ್ಬರೂ ಒಬ್ಬರಿಗೊಬ್ಬರು ಸಮೀಪವಾಗಿ ಬಾಳಿದರೇನೇ ಸಾಧ್ಯವಾದೀತು. ಮುಖನೋಡದೆ ಎಲ್ಲೋ ಏನೋ ಇರುವ ಒಂದು ಆಫೀಸಿನಿಂದ ಉಪದೇಶಪರಂಪರೆ ಬರುತ್ತಿದ್ದರೆ ರೈತ ಅದನ್ನು ವಿಶ್ವಾಸದಿಂದ ನೋಡುವುದಿಲ್ಲ. ರೈತನ ಪ್ರತ್ಯಕ್ಷ ಕಷ್ಟನಷ್ಟಗಳ ಅನುಭವವಿಲ್ಲದೆ ಹೊರಟ ಆ ಉಪದೇಶವಾದರೂ ಹೆಚ್ಚಿನಪಕ್ಷ ಕೆಲಸಕ್ಕೆ ಬಾರದ್ದೇ ಇರುತ್ತದೆ. ಒಟ್ಟು ಸಮಯ, ಕಾಗದ, ಸಂಬಳ ದಂಡತೆರುವುದೊಂದೇ ಬಂದಹಾಗಾಯಿತು.

ಇವಕ್ಕೆ ಪರಿಹಾರ ರೈತನನ್ನೂ ತಜ್ಞನನ್ನೂ ಒಂದೆಡೆಯಲ್ಲೇ ಕೂಡಿಸು ವುದು. (೨) ಮುಖ್ಯ ಕಾರ್ಯಾಲಯದಿಂದ ಹೊಲಗಳಿಗೆ ಅನುಭವಕೊಡಲು ಬರುವ ಈ ತಜ್ಞಮಹಾಶಯರು "ಹೌದು ಬಸವ"ಗಳಾಗಿರಕೂಡದು. ಮೇಲಿನಿಂದ ಬಂದ ಆದೇಶವನ್ನೂ ಚಾಚೂ ಎನ್ನದೆ ಅಕ್ಷರಶಃ ಪಾಲಿಸುವ ಹನುಮಾನ್ ಶಿಖಾಮಣಿಗಳ ಮೇಲೆ ಸ್ವತಂತ್ರ ಬುದ್ಧಿಯ ರೈತನಿಗೆ ಗೌರವ ಉಂಟಾಗುವುದಿಲ್ಲ. (೩) ಮೊದಲೇ ಪ್ರಸ್ತಾಪಿಸಿದಂತೆ ಹೊಲಗೆಲಸಕ್ಕೆ ಹಲವು ಬಗೆಯ ತಜ್ಞರ ಅನುಭವಬೇಕಾಗುವುದು. ಅವರು ಒಬ್ಬೊಬ್ಬರು ಒಂದೊಂದು ಕಡೆ ನೆಲಸಿದ್ದರೆ ರೈತನಿಗೆ ಸಿಗುವ ಅನುಭವ ಒಂದಕ್ಕೊಂದು ಪೂರಕವಾಗಿರುವುದರ ಬದಲು ವಿರೋಧಮಯವಾಗಬಹುದು. ಈ ದುರ್ದೆಶೆಯನ್ನು ನೀಗಿಸಬೇಕಾದರೆ ಆ ಬೇರೆ ಬೇರೆ ವಿಭಾಗದ ತಜ್ಞರನ್ನು ಒಂದೇ ಕಡೆ ಸೇರಿಸಬೇಕು. ಅವರ ಪರಸ್ಪರ ಸುಖಕಷ್ಟಗಳೂ, ಪರ್ಯಾಪ್ತಿ ಸೀಮೆಗಳೂ ಅವರಿಗೆ ಗೋಚರಕ್ಕೆ ಬರಬೇಕಾದರೆ ಸಾಮೀಪ್ಯವೊಂದು ಮುಖ್ಯ ಸಾಧನವಾಗುವುದು. (೪) ಹೀಗೆ ತಜ್ಞರೂ ಕೂಡ ಪ್ರದೇಶದ ಸರ್ವತೋಮುಖವಾದ ಉನ್ನತಿಯಲ್ಲಿ ಪ್ರತ್ಯಕ್ಷವಾದ ಭಾಗವಹಿಸುವುದು ತಮ್ಮ ಪರಮ ಸೌಭಾಗ್ಯವೆಂದು ಎಣಿಸುತ್ತಿರುವುದರಿಂದಲೇ, ಅವರು ತಂತಮ್ಮ ಯೋಗ್ಯತೆಗೆ ಸಾಲದ ಕಡಮೆ ಸಂಬಳದಲ್ಲಿ ಟೀವೀಏ ನೌಕರಿಗೆ ಸೇರಿರುವುದು. ಸ್ವಾರ್ಥೋದ್ದೇಶದ ಯೋಜನೆ ಸಂಸ್ಥೆ ಮುಂತಾದುವುಗಳಲ್ಲಿ ಅವರು ಅಧಿಕಾಧಿಕ ಸಂಬಳಕ್ಕೆ ಕೈಯೊಡ್ಡಿ ತಮ್ಮ ಬೇಳೆ ಬೇಯಿಸಿಕೊಂಡರೆ ಅದನ್ನು ಒಪ್ಪಬಹುದು. ಟೆನಸಿ ಪ್ರದೇಶಕ್ಕಿರುವಂತಹ ಮಹೋದ್ದೇಶ ಸಾಧನೆಯ ಕಾರ್ಯದಲ್ಲಿ ಭಾಗವಹಿಸುವ ಪುಣ್ಯಲಾಭಕ್ಕಾಗಿ ಅವರು ಸ್ವಾರ್ಥದ ಅಂಶವನ್ನು ಕಡಮೆ ಮಾಡುವುದಕ್ಕೆ ಹಿಂಜರಿಯಲಾರರು.

ಇಂಥ ಕೂಡುಬಳಗದಿಂದಲೂ, ಪರಸ್ಪರ ತಿಳುವಳಿಕೆಯಿಂದಲೂ, ವ್ಯಕ್ತಿಯ ವಿಕಾಸವಾಗುವುದು. ವ್ಯಕ್ತಿಸ್ವಾತಂತ್ರ್ಯವೆಂದರೆ ನಿರ್ವಾತ ಪ್ರದೇಶದಲ್ಲಿನ ಸ್ವೇಚ್ಛಾವಿಹಾರವಲ್ಲ. ಸಮಸ್ತ ಸಮಾಜದ ಆಗುಹೋಗುಗಳ ನಡುವೆ, ಒಳ್ಳಿತು-ಕೆಡುಕುಗಳ ನಡುವೆ, ತನ್ನ ಸ್ಥಾನಮಾನಗಳೇನು? ಇತರರ ಹಕ್ಕಿನ ರಾಜ್ಯದ ಮೇಲೆ ಕಾಲಿಡದೆ ತನ್ನ ಸ್ವಂತ ವ್ಯಕ್ತಿ

ತ್ವವನ್ನೂ ವ್ಯಕ್ತಿಸ್ವಾತಂತ್ರ್ಯವನ್ನೂ ಮರೆಯುವುದೆಂತು? ಎಂಬುದನ್ನು ವಿಶಾಲದೃಷ್ಟಿಯಿಂದ ಅರಿತುಕೊಂಡು ಕೈಲಾದಷ್ಟು ಯತ್ನಿಸುವುದು ವ್ಯಕ್ತಿಯ ಸಹಜಧರ್ಮ. ಇದು ವ್ಯಕ್ತಿವಿಕಸನಕ್ಕೆ ಪೋಷಕವಾದುದು; ಪ್ರಜಾತಂತ್ರದ ತತ್ತ್ವಕ್ಕೆ ವರ್ಧಕವಾದದು.

---

## ಅಧ್ಯಾಯ ಒಂಭತ್ತು.

## ಪ್ರಜಾತಂತ್ರದ ಹೆದ್ದಾರಿ : ವಿಕೇಂದ್ರೀಕರಣ.

ಮಹಾ ವೃಕ್ಷಕ್ಕೆ ಬೇಕಾದ ಪೋಷಕ ರಸವು ಮಣ್ಣಿನಿಂದಲೇ ಬಂದರೂ, ಆ ರಸವು ವೃಕ್ಷದ ಅಂಗಾಂಗಗಳಿಗೆ ಪಸರಿಸುವುದಕ್ಕೆ ಬೇರಿನ ನೆರವು ಬೇಕಾದಂತೆ, ಪ್ರಜಾತಂತ್ರದ ಜೀವಸತ್ತ್ವ ಜನರ ಸಹಯೋಗ ಸಹಕಾರಗಳಿಂದಲೇ ತುಂಬಿಬರಬೇಕಾದರೂ, ಆ ಜೀವಸತ್ತ್ವವು ಫಲಿಸಬೇಕಾದರೆ ಪ್ರಜಾತಂತ್ರದ ರಾಷ್ಟ್ರವ್ಯವಸ್ಥೆಯಲ್ಲಿನ ಎಲ್ಲ ಸಣ್ಣದೊಡ್ಡ ಸಂಸ್ಥೆಗಳೂ ತಂತಮ್ಮ ಕಾರ್ಯದಲ್ಲಿ ನಿರತವಾಗತಕ್ಕದ್ದು. ಫೆಡರಲ್ ಇಲಾಖೆಗಳು, ಪ್ರಾಂತ್ಯದ ವಿವಿಧ ವಿಭಾಗಗಳು, ಅಲ್ಲದೆ ಸ್ಥಾನಿಕ ಸಂಸ್ಥೆಗಳು ಕೂಡ ಜತೆಯಾಗಿ ಸಹಕರಿಸತಕ್ಕದ್ದು. ಕೂತಲ್ಲಿಂದ ಏಳುವಾಗ ವಾಶಿಂಗ್ಟನ ರಾಜಧಾನಿಯ ಅಪ್ಪಣೆ ಕಾಯುವುದಾದರೆ ಅದು ಪ್ರಜಾತಂತ್ರದ ಅಣಕವೇ ಸರಿ.

ಟೀವೀಏಯ ಆರಂಭ ಮಾಡಿದಾಗ ಸ್ಥಾನಿಕ ಸಂಸ್ಥೆಗಳಿಗೆ ಕೇಡುಗಾಲ ಬಂದಿರುವುದೆಂದೂ, ಇನ್ನವಕ್ಕೆ ಉಳಿಗಾಲವಿಲ್ಲವೆಂದೂ, ಒಂದು ದೊಡ್ಡ ಹೂಲಿ ಎದ್ದಿತು. ಅದೆಷ್ಟು ಸ್ವಾರ್ಥಪೂರಿತವಾದ ಗಲಭೆಯಾಗಿತ್ತೆನ್ನುವುದನ್ನು ಟೀವೀಏಯ ಹದಿನೈದು ವರುಷದ ಇತಿಹಾಸದಿಂದ ತಿಳಿಯಬಹುದು, ಸ್ಥಾನಿಕ ಸಂಸ್ಥೆಗಳನ್ನು ಹತ್ತಿಕ್ಕುವ ಮಾತೆಲ್ಲಿ? ಅವು ದಿನದಿಂದ ದಿನಕ್ಕೆ ಬಲಗೊಳ್ಳುವಂತೆ ಅವಕಾಶ ಒದಗಿಸುವ ಟೀವೀಏ ಆಚರಣೆ ಎಲ್ಲಿ? ಯಥಾರ್ಥವಾಗಿ ನೋಡಿದರೆ ಸ್ಥಾನಿಕ ಸಂಸ್ಥೆಗಳ ಸ್ವಾಯತ್ತತೆಗೂ, ರಾಜ್ಯಭಾರಕ್ಕೂ ಟೆನಸಿ ಪ್ರದೇಶದಲ್ಲಿ ಒಂದು ಉಬ್ಬರ ಬಂದಿದೆ. ಸ್ಥಾನಿಕ ಸಂಸ್ಥೆಗಳಿಗೆ ಈಗಿರುವಷ್ಟು ಮಹತ್ವ ಹಿಂದೆ ಎಂದೂ ಯಾರೂ, ಕೊಟ್ಟಿರಲಿಕ್ಕಿಲ್ಲ; ಟೀವೀಏಯ ಯಶಸ್ಸಿನಿಂದ ಪ್ರಜಾತಂತ್ರದ ಜೀವಾಳವಾದ ವಿಕೇಂದ್ರೀಕರಣದ ಬೆಂಬಲಿಗರಿಗೆ ಹೊಸ ಹುರುಪು ಬಂದಿದೆ. ಪ್ರತ್ಯಕ್ಷ ಪ್ರಯೋಗದ ಪರಿಣಾಮವಾಗಿ ಅವರ ವಿರೋಧಿಗಳ ಧ್ವನಿ ಅಡಗುತ್ತಿದೆ.

ಕೇಂದ್ರೀಕೃತ ಸರಕಾರವು ವ್ಯಕ್ತಿಸ್ವಾತಂತ್ರ್ಯಕ್ಕೆ ಮಹತ್ತ್ವ ಕೊಡಲಾರದೆಂಬ ದೃಷ್ಟಿಯಿಂದ ವಿಕೇಂದ್ರೀಕರಣದ ಸಿದ್ಧಾಂತಕ್ಕೆ ಮರಳಿ ಜೀವ ಬಂದಿದೆ. ಔದ್ಯೋಗೀಕರಣದ ನವನವೀನವಾದ ಉತ್ಪಾದನಾ ಪದ್ಧತಿಯು ಆರ್ಥಿಕರಂಗದಲ್ಲಿ ಕೇಂದ್ರೀಕರಣವನ್ನು ಹಬ್ಬುತ್ತಿದೆ. ನಾಝೀ, ಫಾಸಿಸ್ಟ್, ಸೋವಿಯಟ್ ಮುಂತಾದ ರಾಜ್ಯ ವ್ಯವಸ್ಥೆಯ ಪದ್ಧತಿಗಳು ರಾಜನೀತಿಯ ಕ್ಷೇತ್ರದಲ್ಲಿ ಕೇಂದ್ರೀಕರಣಕ್ಕೆ ದಾರಿ ಮಾಡುತ್ತಿವೆ. ಆದ್ದರಿಂದ ಇಕ್ಕಡೆಯಿಂದಲೂ ಹಾತೊರೆದು ಬರುತ್ತಿರುವ ಕೇಂದ್ರೀಕರಣದ ಎರಡು ಪೆಡಂಭೂತಗಳ ನಡುವೆ ವ್ಯಕ್ತಿಸ್ವಾತಂತ್ರ್ಯ ವಿಲಿವಿಲಿ ಒದ್ದಾಡುತ್ತಿದೆ ಎಂದು ಹೇಳಿ, ಇದರಿಂದ ವ್ಯಕ್ತಿಸ್ವಾತಂತ್ರವನ್ನುಳಿಸಿಕೊಳ್ಳಲು ವಿಕೇಂದ್ರೀಕರಣವೊಂದೇ ದಾರಿ, ಅದುವೆ ಪ್ರಜಾತಂತ್ರದ ಹೆದ್ದಾರಿ ಎಂದು ಸಾರುವ ತತ್ತ್ವಜ್ಞಾನಿಗಳನೇಕರಿದ್ದಾರೆ. ಅಂಥವರಿಗೆ ಟೀವೀಏ ಪ್ರಯೋಗ ವರದಾನದಂತೆ ಕಾಣುವುದು. ಟೀವೀಏ ಯಶಸ್ಸು ವಿಕೇಂದ್ರೀಕರಣದ ಸತ್ಫಲವನ್ನು ಅವರು ಜಗತ್ತಿಗೆ ಸಾರಲು ಸಹಾಯವಾಗುವುದು.

ಟೀವೀಏಯಲ್ಲಿ ನಡೆದ ವಿಕೇಂದ್ರೀಕರಣ ಬರಿಯ ತಾತ್ತ್ವಿಕ ವಿಕೇಂದ್ರೀಕರಣವಲ್ಲ. ಸ್ಥಾನಿಕ. ಸಂಸ್ಥೆಗಳಿಗೆ ಸಿಕ್ಕಿದ ಸ್ವರಾಜ್ಯ ಅರ್ಥಶೂನ್ಯವಾದುದಲ್ಲ- ಟಿನಸಿಯ ಮಹೋದ್ದೇಶಕ್ಕೆ ಸರಕಾರದ ಎಲ್ಲ ಸಂಸ್ಥೆಗಳೂ ನೆರವಾಗಬೇಕೆಂಬುದೇ ಮೊದಲನೆಯ ಚಿಂತೆ. ಸ್ಥಾನಿಕ ಸಂಸ್ಥೆಗಳು ಫೆಡರಲ್ ಸಂಸ್ಥೆಗಳೊಡನೆ ಬರಿಯ ಬಾಯಿಮಾತಿನಲ್ಲೆ ಸಹಕರಿಸುವುದಲ್ಲ. ಪ್ರದೇಶದ ಬೆಳವಣಿಗೆಯ ಪ್ರತಿಯೊಂದು ಕೆಲಸದಲ್ಲಿಯೂ—ಕಾಡು ನೆಡುವುದು, ನಿಗ್ರೋಜನರ ಸಲುವಾಗಿ ವಿಹಾರಸ್ಥಾನಗಳನ್ನು ನಿರ್ಮಿಸುವುದು, ಮಲೇರಿಯಾ ಹಾವಳಿ ತಡೆಯುವುದು, ಹಾದಿ ಕಡಿಯುವುದು, ಔದ್ಯೋಗಿಕ ಶೋಧನೆ, ಹೊಲಗೆಲಸಕ್ಕನುಕೂಲಿಸುವ ಯಂತ್ರಗಳನ್ನು ರಚಿಸುವುದು—ಫೆಡರಲ್ ಸರಕಾರಕ್ಕೆ ಪ್ರಾಂತೀಯ ಸರಕಾರವೂ, ಪ್ರಾಂತೀಯ ಸರಕಾರದ ವಿವಿಧ ವಿಭಾಗಗಳಿಗೆ ಸ್ಥಾನಿಕ ಸಂಸ್ಥೆಗಳೂ, ನೆರವಾದುದರಿಂದಲೇ ಪ್ರಾದೇಶಿಕ ಉನ್ನತಿಯು ಸುಗಮವಾಗಿ, ಆತಂಕರಹಿತವಾಗಿ ನಡೆಯಿತೆಂದು ಹೇಳಲಡ್ಡಿಯಿಲ್ಲ. ವಿಕೇಂದ್ರೀಕರಣದ ತತ್ತ್ವಕ್ಕೆ ಇದ

ರಿಂಪಲೇ ಎಷ್ಟೋ ಸ್ಫೂರ್ತಿ ದೊರೆತಿದೆ. ಇದಕ್ಕೆಯೆಪ್ರಗತಿಪರವಾದ ವಿಕೇಂದ್ರೀಕರಣವೆನ್ನುವುದು. ವಿಕೇಂದ್ರೀಕರಣ ಎಂದೊಡನೆ ಏನೋ ಇದ್ದುದನ್ನು ಹರಿಹಂಚಾಗಿ ಮಾಡುವುದೆಂಬ ಒಂದರ್ಥ ಹೊರಡುವುದುಂಟು. ಹಾಗಾದಲ್ಲಿ ವಿಕೇಂದ್ರೀಕರಣದಿಂದ ಜನಾಂಗದ ಸಾವಿಗೆ ನೇರವಾದ ದಾರಿ ಮಾಡಿಕೊಟ್ಟಂತಾದೀತು. ಬದಲು ಪರಸ್ಪರ ಸಹಯೋಗ, ಸಹಕಾರ, ಸಮರಸ, ಸಮನ್ವಯಗಳಿಗೆ ಅವಕಾಶ ದೊರೆತಲ್ಲಿ ಅಂಥ ವಿಕೇಂದ್ರೀಕರಣದಿಂದ ಜನಾಂಗದ ಜೀವನದಲ್ಲಿ ನವಚೈತನ್ಯ ಉದಿಸಬಲ್ಲುದು.

(೧) ಫೆಡರಲ್ ಸಂಸ್ಥೆಯೊಡನೆಯೋ, ಪ್ರಾಂತೀಯ ವಿಭಾಗದೊಡನೆಯೋ ಬಡಿದಾಡಿ, ಕಚ್ಚಾಡಿ, ಹಣಕಾಸು ಒದಗಿಸುವುದರಲ್ಲೇ ಹಲವು ಸ್ಥಾನಿಕ ಸಂಸ್ಥೆಗಳು ಜೀವ ತೇಯುತ್ತವೆ. ಹಣಕಾಸು ಹೇಗೂ ಕಟ್ಟಕಡೆಗೆ ಒದಗಿದಾಗ ಅದನ್ನು ಉಚಿತಮಾರ್ಗದಲ್ಲಿ ಖರ್ಚುಮಾಡುವುದಕ್ಕೆ ಬೇಕಾದ ಉತ್ಸಾಹವೂ ಉಳಿದಿರುವುದಿಲ್ಲ. ಇಂಥ ಸ್ಥಾನಿಕ ಸಂಸ್ಥೆಗಳಿದ್ದರೇನು, ಹೋದರೇನು? ಆದರೆ ಟೀವೀಏ ಕೆಲಸಮಾಡುವ ಕ್ರಮವೇ ಬೇರೆ ಅಲ್ಲಿಯ ವಿಕೇಂದ್ರೀಕರಣದ ಪರಿಯೇ ಬೇರೆ. ಉದಾಹರಣೆಗಾಗಿ ವಾಟ್ಸ್‌ಬಾರ ಅಣೆಕಟ್ಟಿನ ಸ್ಥಳದಲ್ಲಿ ವಾಚನಾಲಯ ಸ್ಥಾಪನೆಯಾದ್ದನ್ನು ನೋಡೋಣ. ವಾಟ್ಸ್‌ಬಾರ್ ಕೆಲಸಗಾರರಿಗೆ ವಾಚನಾಲಯದ ಅಗತ್ಯಬಿತ್ತು. ಆಗ ಟೀವೀಏ ಸಂಯುಕ್ತರಾಷ್ಟ್ರದ ವಾಚನಾಲಯ ವಿಭಾಗಕ್ಕೂ, ನಾಕ್ಸ್‌ವಿಲೆಯ ನಗರ ವಾಚನಾಲಯ ಸಂಸ್ಥೆಗೂ, ಬರೆದುಕೊಂಡಿತು. ಏಕೆಂದರೆ ಈ ಎರಡು ಸಂಸ್ಥೆಗಳಿಗೂ ಓದುಗರ ನಿಕಟ ಪರಿಚಯವಿರುವುದರಿಂದ ಅವರ ಅನುಭವದ ಉಪಯೋಗ ಪಡೆಯುವುದಕ್ಕೆ ಟೀವೀಏ ಅಣೆಕಟ್ಟುಗಳ ಯೋಜನೆ ಮುಂದುವರಿದಂತೆ ಟೆನಸಿಯ ಒಟ್ಟು ಹದಿಮೂರು ತಾಲೂಕುಗಳಲ್ಲಿ ಮೊದಲಬಾರಿಗೆ ವಾಚನಾಲಯದ ಅಭಿವೃದ್ಧಿಯಾಯಿತು. ಲೈಬ್ರೆರಿ ಪುಸ್ತಕಗಳನ್ನು ಹೊತ್ತು ಊರಿಂದೂರಿಗೆ ಸಂಚರಿಸುವ ವಾಚನಾಲಯಗಳನ್ನು, ಈಗ ಟೆನಸಿಯಲ್ಲಿ ಎಲ್ಲೆಲ್ಲೂ ನೋಡಬಹುದು. ವಾಚನಾಲಯಗಳಿಗೆ ನಿಜವಾದ ಪರೀಕ್ಷಾಕಾಲ ಬಂದುದು ವಾಟ್ಸ್‌ಬಾರ್ ಕೆಲಸ ಸಂಪೂರ್ಣವಾಗಿ, ಟೀವೀಏ ತನ್ನ

ಪಾಲಿನ ಸಹಾಯಧನ ನಿಲ್ಲಿಸಿದಾಗ, ವಾಚನಾಲಯಕ್ಕೂ, ಅದರೊಡನೆ ವಿಕೇಂದ್ರೀಕರಣದ ತತ್ತ್ವಕ್ಕೂ ಆಗ ಜೀವನ ಮರಣದ ಪ್ರಶ್ನೆಯೊದಗಿತು. ಟೆನಸಿ ಪ್ರಾಂತ್ಯದ ಜನ ಒಟ್ಟು ಸೇರಿ, ವಾಚನಾಲಯಕ್ಕೆ ಪ್ರಾಂತೀಯ ಸರಕಾರದಿಂದ ಹಣಮಂಜೂರು ಮಾಡುವೆನೆಂದು ಮುಂದಾದರೋ, ವಾಚನಾಲಯ ಸ್ಥಾಪಿತವಾದ ಆ ಹತ್ತು ಹನ್ನೊಂದು ಜಿಲ್ಲೆಯ ಪ್ರತಿನಿಧಿಗಳು ಒಂದೆಡೆಸೇರಿ ತಂತಮ್ಮ ಜಿಲ್ಲೆಯ ಅಧಿಕಾರಿಗಳಿಂದ ಹಣ ಪಡೆದು ವಾಚನಾಲಯ ನಡೆಯಿಸುವೆವೆಂದು ಧೈರ್ಯದಿಂದ ಮುನ್ನುಗ್ಗಿದರೋ, ಅಂದಿಗೆ ವಿಕೇಂದ್ರೀಕರಣದ ತತ್ತ್ವ ವಿಜಯಿಯಾಯಿತು. ವಾಚನಾಲಯಗಳು ಸಾಯಲಿಲ್ಲ. ವಾಚನಾಲಯದ ಪ್ರಶ್ನೆಯ ಕುರಿತು ಜನರಲ್ಲಿ ಬೇಕಷ್ಟು ಪ್ರಚಾರವೂ ಸಂಘಟನೆಯೂ ನಡೆದು ಪ್ರಾಂತ್ಯದ ನ್ಯಾಯವಿಧಾಯಕ ಸಭೆಯಲ್ಲಿಯೂ ಚರ್ಚೆ ಎದ್ದುದರಿಂದ ವರ್ಷಕ್ಕೆ ೨೫,೦೦೦ ಡಾಲರು ಮಂಜೂರಾದುದು ಸಾಮಾನ್ಯ ವಿಷಯವಲ್ಲ.

ಹಿಂದೆ ವಾಚನಕ್ಕೆ ಪುಸ್ತಕಸಂಗ್ರಹವಿಲ್ಲದೆ ನಿರ್ಗತಿಕರಾಗಿದ್ದ ಟೆನಸಿಪ್ರಾಂತ್ಯದ ಜನಕ್ಕೆ ಇಂದು ೫೦ಸಹಸ್ರ ಪುಸ್ತಕಗಳ ಸೌಕರ್ಯವುಂಟು. ಸಾವಿರಾರು ಜನ ಓದುಗರಿದ್ದಾರೆ. ಜನರಲ್ಲಿ ವಾಚನಾಭಿರುಚಿ ವೃದ್ಧಿಯಾಗುತ್ತಿದೆ. ಇದೇ ರೀತಿ ಟೀವೀಏ, ಪ್ರಾಂತೀಯ ಸರಕಾರ ಮತ್ತು ಸ್ಥಾನಿಕ ಸಂಸ್ಥೆಗಳ ಒಮ್ಮತದ ಸಹಕಾರದ ದೆಸೆಯಿಂದ ಗಂಟರ್ಸ್ವಿಲೆ, ಹಿವಾಸಿ ಮುಂತಾದ ಆಣೆಕಟ್ಟು ಸ್ಥಳಗಳಲ್ಲಿಯೂ ಸುಲಭದಲ್ಲಿ ವಾಚನಾಲಯಗಳ ವ್ಯವಸ್ಥೆಯಾಗುತ್ತಿದೆ.

(೨) ವಿಹಾರ ಕೇಂದ್ರಗಳ ಸ್ಥಾಪನೆಯಲ್ಲಿಯೂ ಇದೇ ಬಗೆಯ ಸಹಕಾರ ಬೆಳೆದಿರುವುದನ್ನು ನೋಡಬಹುದು. ೧೯೩೪ರಲ್ಲಿ ಟೀವೀಏ ಜಲಾಶಯಗಳ ಸಮೀಪದ ದಂಡೆಯ ಮೇಲೆ ಹಲಕೆಲವು ಪ್ರದರ್ಶಕ ವಿಹಾರ ಕೇಂದ್ರಗಳನ್ನು ಏರ್ಪಡಿಸಿತು. ಟೆನಸಿ ಪ್ರದೇಶದ ಎಲ್ಲೆಡೆಯಿಂದಲೂ ಇವನ್ನೇ ಸಂದರ್ಶಿಸಿ ಹೋದ ಜನ ತಂತಮ್ಮ ಪ್ರಾಂತ್ಯದ ಜಲಾಶಯಗಳಲ್ಲಿಯೂ ಇಂಥ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ಆತುರಪಟ್ಟರು. ಒಂದೇ ಟೀವೀಏ ಅಂಥ ಕೇಂದ್ರಗಳ ಕೆಲಸ ಕೈಗೊಳ್ಳ

ಬೇಕು, ಇಲ್ಲವೆ ಸ್ಥಾನಿಕ ವಿಭಾಗಗಳು ಸಹಕರಿಸಬೇಕು. ಜನರ ಬೇಡಿಕೆಯ ಆಳವನ್ನೂ, ಅರ್ಥವನ್ನೂ ಗಮನಿಸಿ ಪ್ರಾಂತೀಯ ಸರಕಾರವು ವಿಹಾರಕೇಂದ್ರಗಳ ಪ್ರಶ್ನೆಯನ್ನು ಕೈಗೆತ್ತಿಕೊಂಡುದು ವಿಕೇಂದ್ರೀಕರಣದ ವಿಜಯಕ್ಕೆ ಡಂಗುರವಿಕ್ಕಿತು. ಟೆನಸಿ ಪ್ರಾಂತ್ಯವೊಂದನ್ನೇ ತೆಗೆದುಕೊಂಡರೂ ರಾಷ್ಟ್ರೀಯ ವಿಹಾರಕೇಂದ್ರಗಳ ಒಂದು ಜಾಲವೇ ಪ್ರಾಂತ್ಯದ ಎಲ್ಲೆಡೆಯಲ್ಲಿ ಹರಡಿದೆ. ಪ್ರಾಂತ್ಯದ ಆಡಳಿತೆ ಬದಲಾದರೂ ವಿಹಾರಕೇಂದ್ರಗಳ ಮಟ್ಟಿನ ಧೋರಣೆ ಸ್ಥಿರವಾಗಿ ನಿಂತಿದೆ. ವಿಹಾರಕೇಂದ್ರಗಳ ಸಂಪೂರ್ಣ ಖರ್ಚಿನ ಜವಾಬುದಾರಿಯನ್ನು ಪ್ರಾಂತೀಯ ಸರಕಾರವೇ ಹೊತ್ತಿದೆ. ಪ್ರಾಂತ್ಯದ ಸೌಂದರ್ಯ ರಕ್ಷಣೆಯ ಸೌಶೀಲ್ಯ ಸೌಜನ್ಯಗಳು ಬೇರೆ ಯಾವ ದೇಶದಲ್ಲಿಯೂ ಸಿಗುವುದು ವಿರಳ.

(೩) ಟೀವೀಏ ವಿದ್ಯುತ್ ತಯಾರಿಕೆ ವಿಕೇಂದ್ರೀಕರಣದ ತತ್ತ್ವಕ್ಕೆ ಇನ್ನೊಂದು ಮಾದರಿ. ಟೀವೀಏ ವಿದ್ಯುತ್ತು ತಯಾರಿಸುವುದರಲ್ಲಿ ಪ್ರಪಂಚದಲ್ಲಿ ಉನ್ನತಸ್ಥಾನವನ್ನು ಪಡೆದಿದೆಯೆಂದೂ, ಆರು ಪ್ರಾಂತ್ಯ ಸರಕಾರಗಳು ಇದರಲ್ಲಿ ಸಹಕರಿಸುತ್ತವೆಂದೂ, ಅಲ್ಲದೆ ನಾಲ್ಕು ಮಿಲಿಯ ಜನರ ಜೀವನನಿರ್ವಾಹ ನಡೆಯುವುದೆಂದೂ ಈ ಮೊದಲೇ ಹೇಳಿದ್ದೇವೆ. ಉತ್ಪಾದನೆ ಏನೋ ಕೇಂದ್ರೀಕೃತವಾಗಿಯೇ ಜರಗಿದರೂ ವಿತರಣೆಯಲ್ಲಿ ಕೇಂದ್ರೀಕರಣಕ್ಕೆಡೆಯಿರುವುದರಿಂದ ಪ್ರಜಾತಂತ್ರಕ್ಕೆ ಭಂಗ ಬಂದಿಲ್ಲ. ಉತ್ಪಾದನೆಯ ವಿಷಯದಲ್ಲಿ ಕೇಂದ್ರೀಕರಣ ಇಲ್ಲದೆ ಉಪಾಯವಿಲ್ಲ. ಹೇರಳ ಉತ್ಪಾದನೆಯ ತತ್ತ್ವವು ಮಿತವ್ಯಯವನ್ನು ಸೃಷ್ಟಿಸಬೇಕಾದರೆ ಉತ್ಪಾದನೆಗೆ ದೊಡ್ಡ ದೊಡ್ಡ ಯಂತ್ರಗಳೂ, ದೊಡ್ಡ ದೊಡ್ಡ ಕಾರ್ಖಾನೆಗಳೂ ಒಂದೇ ಒಂದು ಸ್ಥಳದಲ್ಲಿ ಸೇರಬೇಕಾಗಿ ಬರುವುದು. ಆದರೆ ವಿತರಣೆಯ ಅಂಶವನ್ನು ವಿಕೇಂದ್ರೀಕರಿಸುವುದಕ್ಕೆ ಏನಡ್ಡಿ? ಚಿಲ್ಲರೆಯಾಗಿ ವಿದ್ಯುತ್ತನ್ನು ಮಾರುವಾಗ ಹೇರಳ ಉತ್ಪಾದನೆಯ ಸಿದ್ಧಾಂತಕ್ಕೆ ಆಸ್ಪದವಿಲ್ಲ. ನದಿಯ ವಿದ್ಯುತ್ ತಯಾರಿಕೆಯ ಬೃಹತ್ ಕೇಂದ್ರಗಳಿಂದ ಟೀವೀಏ ಸುಮಾರು ೧೫೦ ವಿತರಣಾ ಸಂಘಗಳಿಗೆ ವಿದ್ಯುತ್ತನ್ನೊದಗಿಸುತ್ತದೆ. ಇವುಗಳಲ್ಲಿ ೪೫ ಸಹಕಾರಿ ಸಂಘ

ಗಳು, ಉಳಿದುವು ನಗರಸಭೆಯ ಅಡಳಿತಕ್ಕೊಳಪಟ್ಟುವು. ವಿದ್ಯುತ್ತಿನ ಪೂರೈಕೆಯಲ್ಲಿ ಏನು ಲೋಪದೋಷಗಳು ಕಂಡುಬಂದರೂ ಅವಕ್ಕೆ ಈ ೧೬೫ ಸಂಘಗಳನ್ನು ಹೊಣೆಯಾಗಿ ಜನ ಹಿಡಿಯುಬಹುದು. ಇವು ಹತ್ತಿರವಲ್ಲೇ ಇರುವುದರಿಂದ ಚಿಕ್ಕಚಿಕ್ಕ ದೂರುಗಳನ್ನೂ ತಿಳಿಯಪಡಿಸಿ ಅವನ್ನು ತಿದ್ದಿಸಬಹುದು. ಹೀಗೆ ಜನತೆಯ ನಿಯಂತ್ರಣಕ್ಕೊಳಗಾದ ಸ್ಥಾನಿಕ ಸಂಘಗಳು ವಿದ್ಯುತ್ತನ್ನು ಅತಿ ಕಡಮೆ ದರದಲ್ಲಿ ಜನರಿಗೊದಗಿಸಿದರೂ ಹೇರಳ ವಾರ್ಷಿಕ ಉತ್ಪನ್ನವನ್ನು ಪಡೆಯುತ್ತವೆ.

ರಾಷ್ಟ್ರಶಕ್ತಿಯ ನಿರ್ಮಾಣವೇ ಮಾರ್ಕ್ಸವಾದದ ಚರಮಲಕ್ಷ್ಯವಾದರೆ, ರಾಷ್ಟ್ರಶಕ್ತಿಯನ್ನು ಆದಷ್ಟು ಕುಂದಿಸುವುದು ಪ್ರಜಾತಂತ್ರದ ಅಧ್ವರ್ಯುಗಳ ತೀರ ಇತ್ತೀಚೆಗಿನ ಗುರಿಯಾಗಿದೆ. ಕೇಂದ್ರೀಕೃತವಾದ ರಾಷ್ಟ್ರದ ಬಲವು ದಿನೇ ದಿನೇ ಹೆಚ್ಚುತ್ತಿರುವುದರಿಂದ ರೋಸಿಹೋಗಿ ಪಾಶ್ಚಾತ್ಯ ದೇಶಗಳಲ್ಲಿನ ಹಲವು ರಾಜನೀತಿಜ್ಞರು ವಿಕೇಂದ್ರೀಕರಣಕ್ಕೆ ಒಲಿದಿದ್ದಾರೆ. ಇಂಗ್ಲೆಂಡಿನಲ್ಲಿ ಲಾಸ್ಕಿ, ಫ್ರಾನ್ಸಿನಲ್ಲಿ ದುಗುಯಿ, ಸಂಯುಕ್ತರಾಷ್ಟ್ರದಲ್ಲಿ ಮಿಸ್ ಫೊಲ್ಲೆಟ್ ಮುಂತಾದವರು ಕೇಂದ್ರದಲ್ಲಿರುವ ಸಾರ್ವಭೌಮ ಸರಕಾರದ ಅಧಿಕಾರ ವಿಸ್ತಾರವನ್ನು ತೀವ್ರವಾಗಿ ಖಂಡಿಸುವವರಲ್ಲಿ ಕೆಲವರು. ಸಾರ್ವಭೌಮ ಸರಕಾರಕ್ಕೆ ಒಂದು ಗಡಿಮಿತಿ ಇರತಕ್ಕದು. ಕೆಲವು ವಿಷಯಗಳಲ್ಲಿ ಅದಕ್ಕೆ ಸಂಪೂರ್ಣ ಅಧಿಕಾರ ಇರತಕ್ಕದು ಎಂದೂ, ಅದೇ ಕಾಲಕ್ಕೆ ಸ್ಥಾನಿಕಸಂಸ್ಥೆಗಳಿಗೂ ತಮ್ಮ ಪರ್ಯಾಪ್ತಿಯೊಳಗೆ ಸ್ವತಂತ್ರವಾಗಿ ಆಚರಿಸುವ ಅಧಿಕಾರ ಇರಬೇಕೆಂದೂ, ಇವರುಗಳು ವಾದಿಸುತ್ತಾರೆ.

ಆರ್ಥಿಕರಂಗದಲ್ಲಿ ದಿನೇ ದಿನೇ ಬಲಗೊಳ್ಳುತ್ತಿರುವ ಕೇಂದ್ರೀಕರಣದ ಗಾಳಿ ರಾಜಕೀಯ ರಂಗದಲ್ಲಿ ಹಾವಳಿ ಎಬ್ಬಿಸಬಾರದೆಂಬುದು ಈ ರಾಜಕೀಯ ದ್ವೈತಿಗಳ ಮತ. ಕೇಂದ್ರವೇ ನಿರ್ವಹಿಸುವ ಕೆಲವು ಕ್ಷೇತ್ರಗಳನ್ನು ಕೇಂದ್ರಕ್ಕೆ ಬಿಟ್ಟುಕೊಡೋಣ. ಸ್ಥಾನಿಕ ಸಂಸ್ಥೆಗಳಿಂದಾಗುವುದನ್ನು ಸ್ಥಾನಿಕ ಸಂಸ್ಥೆಗಳೇ ಮಾಡಲಿ, ಎನ್ನುವುದೇ ರಾಜಕೀಯ ದ್ವೈತದ ತತ್ತ್ವ. ಅದರಲ್ಲಿ ಇನ್ನೊಂದು ಸಿಂಡಿಕಲ್ ಎಂಬ ವಿಭೇದ

ವ್ರಂಟು. ಈ ಪಕ್ಷದವರಿಗೆ ಸಾರ್ವಭೌಮ ಸರಕಾರದ ಅಗತ್ಯವೇ ಇಲ್ಲ, ಅದರ ಬದಲು ಪ್ರತಿಯೊಂದು ವ್ಯವಸಾಯಕ್ಕೂ ಒಂದೊಂದು ಸ್ವತಂತ್ರ ಆಡಳಿತೆ ಇರಬೇಕು. ಉದಾಹರಣೆಗೆ ಬಟ್ಟೆಯ ಮಗ್ಗದವರ ಸಂಘಕ್ಕೆ ವಿಶಿಷ್ಟವಾದ ರಾಜ್ಯಾಧಿಕಾರ ಸಿಗಬೇಕು. ಅಂತೆಯೆ ಇತರ ಸಂಘಗಳಿಗೂ ಅಧಿಕಾರಬರಲಿ· ಮಧ್ಯಯುಗದಲ್ಲಿನ ಗಿಲ್ಡ್ ಪದ್ಧತಿಯಂತೆ ರಾಷ್ಟ್ರೀಯ ಸರಕಾರ ರೂಪುಗೊಳ್ಳಬೇಕು, ಎನ್ನುತ್ತಾರೆ ಸಿಂಡಿಕಲ್ ಜನರು. ಇದನ್ನೊಂದು ಅತಿಗಾಮಿ ಪಕ್ಷವೆಂದು ಕಟ್ಟಿಕೊಂಡರೂ ಪ್ರಥಮ ಮಹಾಯುದ್ಧಾನಂತರದ ರಾಜಕೀಯ ಚಳುವಳಿಗಳ ಅನುಭವದ ದೆಸೆಯಿಂದ ರಾಜಕೀಯದ್ವೈತವಾದಕ್ಕೆ ಸಾಕಷ್ಟು ಬೆಂಬಲ ದೊರೆಯುವುದು. ೧೯೧೮ರಿಂದ ೧೯೩೯ರ ವರೆಗಿನ ಜಾಗತಿಕ ಇತಿಹಾಸದಲ್ಲಿ ರಾಜಕೀಯ ಕೇಂದ್ರೀಕರಣಕ್ಕೆ ಮಹಾಪೂರ ಬಂದಂತಾಗಿತ್ತು. ನಾಝೀ, ಫಾಸಿಸ್ಟ, ಸೋವಿಯತ್-ಮುಂದಿನ ಮಹಾ ಯುದ್ಧದಲ್ಲಿ ಪ್ರತ್ಯಕ್ಷ ಭಾಗವಹಿಸಿದ ಈ ಮೂರು ರಾಜ್ಯಪದ್ಧತಿಗೂ ಕೇಂದ್ರೀಕರಣದ ತತ್ತ್ವವೇ ಅಡಿಗಲ್ಲು. ಒಂದಲ್ಲ ಒಂದು ರೀತಿಯಿಂದ ಕೇಂದ್ರೀಕರಣವು ರಾಜಕೀಯ ವಿದ್ವೇಷಕ್ಕೆ ಕಾರಣವಾದುದನ್ನು ನಾವು ನೋಡಬಹುದು. ಇಡಿಯ ರಾಷ್ಟ್ರವನ್ನೇ ಯುದ್ಧಮುಖಕ್ಕೆ ಬಲಿಕೊಡಬೇಕಾದ ಸಂದರ್ಭದಲ್ಲಿ ಸ್ಥಾನಿಕಸ್ವಾತಂತ್ರ್ಯಕ್ಕೂ, ತನ್ಮೂಲಕ, ವ್ಯಕ್ತಿಸ್ವಾತಂತ್ರ್ಯಕ್ಕೂ ಬೆಲೆಕೊಡುವುದು ಸಾಧ್ಯವಾಗಲಾರದು. ಜರ್ಮನಿಯೂ ಇಟೆಲಿಯೂ ನೇರವಾಗಿ ಯುದ್ಧಸನ್ನಾಹದಲ್ಲಿ ತೊಡಗಿದ್ದುದರಿಂದ ಇದನ್ನರಿತ ಸೋವಿಯತ್ ಸರಕಾರವಾದರೂ ಯುದ್ಧಸಿದ್ಧತೆ ಮಾಡಲೇ ಬೇಕಾಗಿ ಬಂತು. ರಾಷ್ಟ್ರೀಯ ಗಂಡಾಂತರದ ಸನ್ನಿವೇಶದಲ್ಲಿ ವ್ಯಕ್ತಿಸ್ವಾತಂತ್ರ್ಯ, ಸ್ಥಾನಿಕ ಸ್ವರಾಜ್ಯ ಮುಂತಾದ ಕೋಮಲ, "ಕ್ಷುಲ್ಲಕ" ಭಾವನೆಗಳಿಗೆ ಅವಕಾಶವೆಲ್ಲಿ? ಸರಿ, ರಾಷ್ಟ್ರದ ಜೀವನದಾದ್ಯಂತವೂ ಕೇಂದ್ರ ಸರಕಾರದ ಪದಹತಿಗೆ ಸಿಲುಕಿ ಪೀಡೆಗೊಳಗಾಯಿತು. ಎಲ್ಲ ದೇಶಗಳೂ ಅರೇಳು ವರುಷಕಾಲ ನರಕವಾಸವನ್ನನುಭವಿಸಿದರೂ ರೋಗ ಮುಗಿಯಲ್ಲಿಲ್ಲ. ಯುದ್ಧಾನಂತರದ ಅನ್ನದ ಬನ್ನ ಎಲ್ಲ ದೇಶಗಳನ್ನೂ ಕಂಗೆಡಿಸಿ ಮರಳಿ ಯುದ್ಧಪೂರ್ವದ ಪರಿಸ್ಥಿತಿಯನ್ನೇ ಸೃಷ್ಟಿಸುತ್ತಿದೆ.

ಕೇಂದ್ರೀಕರಣದಿಂದ ರಾಷ್ಟ್ರದ ಕಾರ್ಯಸಾಮರ್ಥ್ಯ ತೀವ್ರವಾಗು ವುದು ನಿಜ; ವಿಕೇಂದ್ರೀಕರಣದಿಂದ ರಾಷ್ಟ್ರ ಕೊಂಚ ಬಲಹೀನವಾಗು ವುದೂ ಹೌದು. ಆದರೆ ಈ ತೆರನ ಬಲ, ದರ್ಪ, ಅಹಂಕಾರ, ಏತಕ್ಕಾಗಿ ಎಂದು ಕೇಂದ್ರೀಕರಣದ ಉಪಾಸಕರು ತಮ್ಮ ಆತ್ಮವನ್ನು ಕೇಳಿಕೊಂಡಿ ದ್ದಾರೆಯೆ? ಕೇಂದ್ರೀಕರಣದ ದೆಸೆಯಿಂದಾಗಿ ಎಷ್ಟು ಸ್ಥಾನಿಕ ಸಂಸ್ಥೆಗಳು ಜೀವನ್ಮೃತವಾಗಿವೆ ಎಂಬುದನ್ನು ಲೆಕ್ಕಿಸಿದ್ದಾರೆಯೆ? ಪ್ರಜಾತಂತ್ರದ ಜೀವಜೀವಾಳವೆನಿಸಿದ ವ್ಯಕ್ತಿಸ್ವಾತಂತ್ರ್ಯದ ಗೋಣು ಮುರಿದಿರುವುದನ್ನು ಗಮನಿಸಿದ್ದಾರೆಯೇ? ಇಲ್ಲ. ರಾಷ್ಟ್ರದ ಶಕ್ತಿವರ್ಧನೆಯ ಗಡಿಬಿ ಡಿಯಲ್ಲಿ, ರಾಷ್ಟ್ರಪೂಜೆಯ ಭಕ್ತಿಯ ಅತಿರೇಕದಲ್ಲಿ, ತಮ್ಮ ಗುರಿ ಯಾವು ದೆಂಬುದನ್ನೇ ಇವರು ಮರೆತಿದ್ದಾರೆ. ಪ್ರಜಾತಂತ್ರಕ್ಕೆ 'ಶಾರ್ಟ್-ಕಟ್' ಹುಡುಕುವ ಈ ಕೆಲಸ ಸಲ್ಲದು. 'ಶಾರ್ಟ್-ಕಟ್' ಗುರಿಯನ್ನು ತಲಪು ವುದೇ ಇಲ್ಲ. ಆ ಒಳದಾರಿ ನಮ್ಮನ್ನಡವಿಗೊಯ್ದು ದಿಗ್ಭ್ರಮೆ ಹುಟ್ಟಿ ಸೀತೇ ಹೊರತು ಗುರಿಮುಟ್ಟಿಸಲಾರದು.

ಹೀಗೆ ಎರಡು ಯುದ್ಧಗಳ ನಡುವಿನ ಇಪ್ಪತ್ತೈದು ವರುಷಗಳಲ್ಲಿ ಪಾಶ್ಚಾತ್ಯದೇಶವು ಕೇಂದ್ರೀಕರಣಕ್ಕೆ ಬಲಿಯಾಗಿ, ಪಾಶ್ಚಾತ್ಯ ನಾಗರಿಕ ತೆಯನ್ನು ಪತನದ ದಾರಿಗೊಯ್ಯುತ್ತಿದ್ದ ಕೆಟ್ಟಗಳಿಗೆಯಲ್ಲಿಯೇ ಪೌರ ಸ್ತ್ಯದೇಶದ ಒಬ್ಬ ಮಹಾತ್ಮ ವೀಕೇಂದ್ರೀಕರಣದ ಷಡಕ್ಷರಿಮಂತ್ರ ವನ್ನು ಜಗತ್ತಿಗೆ ಬೋಧಿಸುತ್ತಿದ್ದ. ಭಾರತದಲ್ಲಿ ಕೇಂದ್ರೀಕೃತ ಬ್ರಿಟಿಷ್ ಸರಕಾರ ಯಾವ ಬಗೆಯಲ್ಲಿ ಜನಜೀವನವನ್ನು ತೊರೆದು ಹಾಳುಗೆಡವಿದೆ, ಜನರ ಸಾಹಸ ಬುದ್ಧಿಯನ್ನು ಕುಂದಿಸಿ ಅವರನ್ನು ಹತವೀರ್ಯರನ್ನಾಗಿ ಮಾಡಿದೆ, ಎಂಬುದನ್ನವಲೋಕಿಸಿದ ಮಹಾತ್ಮನಿಗೆ ಅಂತಹ ಕೇಂದ್ರೀ ಕೃತ ಸಾರ್ವಭೌಮ ಸರಕಾರವು ನಾಶವಾಗಬೇಕೆಂದು ಕಂಡುದು ತಪ್ಪಲ್ಲ. ಜನ ಪ್ರತಿಯೊಂದು ಹೆಜ್ಜೆಗೂ ದಿಲ್ಲಿಯ ಹಾದಿನೋಡುವ ಹವ್ಯಾ ಸದಿಂದ ಮನರೋಸಿ ಆತ ಜನಕ್ಕೆ ವ್ಯಕ್ತಿಸ್ವಾತಂತ್ರ್ಯದ ಪರಮದೀಕ್ಷೆ ಯನ್ನು ಕೊಡಿಸಿದ: ಗ್ರಾಮಸ್ವರಾಜ್ಯದ ಮಹಿಮೆಯನ್ನು ತೋರಿಸಿದ. ಗ್ರಾಮಸ್ವರಾಜ್ಯದಿಂದಲೇ ರಾಮರಾಜ್ಯವನ್ನು ಭೂಮಿಗಿಳಿಸುವೆನೆಂದು

ಭಾರತದ ಎಲ್ಲ ಅನ್ಯಾಯ, ಎಲ್ಲ ಅಭಾವ, ಎಲ್ಲ ದಾರಿದ್ರ್ಯವೂ ಗ್ರಾಮಸಂಸ್ಥೆಗಳ ಉದ್ಧಾರದಿಂದ ಅಡಗುವುದೆಂದು ಜನಕ್ಕೆ ವಿಶ್ವಾಸ ಉಂಟುಮಾಡಿದ. ಗ್ರಾಮಗಳ ನಾಡಾದ ಭಾರತದ ರಾಜ್ಯಾಧಿಕಾರ ಗ್ರಾಮವಾಸಿಗಳ ಕೈಗೆ ಬಂದಾಗಲೇ ರಾಮರಾಜ್ಯ ಸಂಪೂರ್ಣವಾಗುವು ದೆಂದು ಹೋದಲ್ಲೆಲ್ಲ ಸಾರಿದ. ಆರ್ಥಿಕರಂಗದಲ್ಲಿಯೇ ಆದರೂ ಒಂದೊಂದು ಹಳ್ಳಿಯೂ ತನಗೆ ಬೇಕಾದಷ್ಟನ್ನು ಬೆಳೆಸಿಕೊಂಡರೆ ಸಮಾ ಜದ ವೈಷಮ್ಯವೂ, ದಾರಿದ್ರವೂ, ಎಷ್ಟೋ ಪಾಲು ಕಡಮೆಯಾಗುವು ದೆಂದು ನಂಬಿದ. ಸ್ಥಾನಿಕ ಸಂಸ್ಥೆಗಳಿಗೆ ಅಧಿಕಾರವಿಲ್ಲದೆ ದೇಶದಗಲವೂ ಪಾಳುಬಿದ್ದ ಸಾರ್ವಜನಿಕ ಕೆರೆಕುಂಟೆ, ಅಡವಿ-ಚರಾವುಗಳನ್ನು ನೋಡು ವಾಗ ಎದೆ ಉರಿಯುವುದು. ಆ ಮಹಾತ್ಮನ ಔರಸ ಸರಕಾರವೇ ಅವನ ವಿಕೇಂದ್ರೀಕರಣದ ತತ್ತ್ವವನ್ನು ಮೂಲೆಪಾಲು ಮಾಡಿ, ಘಟನಾತ್ಮಕ ವಾಗಿಯೂ, ಘಟನೆಯಿಂದ ಹೊರಗೂ ಪೂಜ್ಯಪಿತನ ಮಾತನ್ನು ಮೀರಿ, ಪಾಶ್ಚಾತ್ಯ ರಾಷ್ಟ್ರಗಳಂತೆ ಶಕ್ತಿವರ್ಧನೆ ಮಾಡಲು ಹವಣಿಸಿ, ಕೇಂದ್ರೀಕರ ಣಕ್ಕೆ ಶರಣುಬಂದಿರುವುದನ್ನು ಕಂಡಾಗ ಎದೆ ನಡುಗುತ್ತಿದೆ. ಹಾದಿ ತಪ್ಪಿ ರುವುದನ್ನು ತೋರಿಸಿಕೊಟ್ಟಾಗಲೂ ಹಿಂದಿರುಗಿ ತಿದ್ದಿಕೊಳ್ಳದೆ ಹೋದಲ್ಲಿ, ಮುಂಬರುವ ಅವನತಿಯನ್ನು ಈಗಲೇ ವಿವರಿಸಬೇಕಾಗಿಲ್ಲ. ಅಂಗೈ ನೋಡಲು ಕನ್ನಡಿ ಬೇಕೆ?

ಅಮೇರಿಕದ ರಾಜನೀತಿಜ್ಞ ಡಿ ಟೋಕ್‌ವಿಲೆ ಹೇಳಿದಂತೆ "ಕೇಂದ್ರ ಸರಕಾರವು ಎಷ್ಟೇ ಕಲಾಕೌಶಲ್ಯವನ್ನು ಸಂಪಾದಿಸಿದರೂ ರಾಷ್ಟ್ರದ ಎಲ್ಲ ಅಂಗಾಂಗಗಳಿಗೆ ಸೇವೆ ಸಲ್ಲಿಸಲಾರದು. ಬಹುಮುಖವಾದ ವ್ಯವ ಹಾರಗಳಲ್ಲಿ ಅದು ಹಸ್ತಕ್ಷೇಪ ಮಾಡಿದರೆ ಸುಮ್ಮಗೆ ಶಕ್ತಿಯ ದುರ್ವಿನಿ ಯೋಗವಷ್ಟೇ ಆದೀತು; ಯಾವ ಸತ್ಪರಿಣಾಮವೂ ಅದರಿಂದ ಒರಲಾ ರದು. ಜನರ ಬಾಹ್ಯ ರೀತಿನೀತಿಗಳನ್ನು ಒಂದೇ ಅಚ್ಚಿನಲ್ಲಿ ಒತ್ತುವ ಕೆಲಸ ಮಾತ್ರ ಸಾಧ್ಯವಾಗಬಹುದು. ಎಲ್ಲ ಆಚರಣೆ, ಸಿಧ್ಧಾರಗಳಿಗೂ ಒಂದು ಏಕರೂಪತೆ ಬರುವುದನ್ನು ಕಂಡು ಕೇಂದ್ರೀಕರಣದ ಹಿತೈಷಿ ಗಳು "ಪರಿಪೂರ್ಣವಾದ ರಾಜ್ಯವ್ಯವಸ್ಥೆ ಎಂದರೆ ಇದೇ ತಾನೆ!" ಎಂದು

ಬೆನ್ನು ಚಪ್ಪರಿಸಿಕೊಂಡಾರು. ಸಮಾಜವು ಎಚ್ಚರಗೊಳ್ಳಬೇಕಾದಾಗಲೂ ಸಮಾಜದ ಏಳ್ಗೆಯ ವೇಗ ಹೆಚ್ಚಬೇಕಾದಾಗಲೂ, ಕೇಂದ್ರೀಕರಣದ ಯಂತ್ರ ಮಂದವಾಗುವುದು. ವ್ಯಕ್ತಿಸಹಕಾರದ ಆವಶ್ಯಕತೆ ಬೀಳುವ ಸಂದರ್ಭ ಬಂದೊಡನೆ ಅದು ತಟಸ್ಥವಾಗುವುದು. ತಾನು ಹೇಳಿದಂತೆಯೇ ನಡೆಯುವ ಪಕ್ಷಕ್ಕೆ ವ್ಯಕ್ತಿ ಸಹಕಾರಕ್ಕೆ ಕೇಂದ್ರೀಕರಣದ ಒಪ್ಪಿಗೆಯುಂಟು. ಆದರೆ ಈ ಬಗೆಯ ಅಡಿಯಾಳ್ತನಕ್ಕೆ ಮಾನವನ ಆತ್ಮ ಒಗ್ಗುವುದಿಲ್ಲ. ಸ್ವಾತಂತ್ರ್ಯದ ಪಿಪಾಸೆ ಅಷ್ಟೊಂದು ನಿರ್ಮೋಹವಾಗಿಲ್ಲದಿರುವುದು ನಮ್ಮ ಸೌಭಾಗ್ಯ.

ಟೀವೀಏಯಲ್ಲಿ ಪ್ರಚುರಕ್ಕೆ ಬಂದ ವಿಕೇಂದ್ರೀಕರಣದಲ್ಲಿ ಒಂದು ಸೂಕ್ಷ್ಮವುಂಟು. ಅದೇನೆಂದರೆ, ಅಧಿಕಾರ ಕೇಂದ್ರೀಕೃತವಾಗಿರಲಿ. ಆದರೆ ಆಡಳಿತೆಯನ್ನು ವಿವಿಧ ಸಂಸ್ಥೆಗಳಿಗೆ ಹಂಚಿ ಹಾಕೋಣ. ಕೇಂದ್ರೀಕೃತ ಅಧಿಕಾರದೊಡನೆ, ಆಡಳಿತೆಯ ವಿಕೇಂದ್ರೀಕರಣ ಸಂಗಮವಾಗಲಿ ಆಗ ಕೇಂದ್ರೀಕರಣ ದೋಷ ಮಾಯವಾಗಿ ವಿಕೇಂದ್ರೀಕರಣದ ಲಾಭಕ್ಕದು ಪೂರಕವಾಗಬಹುದು. ಮೊತ್ತಮೊದಲು ಅಧಿಕಾರಕ್ಕೂ, ಆಡಳಿತಕ್ಕೂ ಇರುವ ಸೂಕ್ಷ್ಮಭೇದವನ್ನು ಗಮನಿಸತಕ್ಕದು. ಪ್ರಾಂತೀಯ ಮತ್ತು ಸ್ಥಾನಿಕ ವೈವಿಧ್ಯದ ಬೆಳವಣಿಗೆಗೆ ಪ್ರೋಷಣೆದೊರೆತರೆ ರಾಷ್ಟ್ರಜೀವನವು ರಸಮಯವಾಗುವುದು. ವೈವಿಧ್ಯದಿಂದ ಬರುವ ಲಾಭವು ರಾಷ್ಟ್ರಕ್ಕೆ ಪೋಷಕವಾಗಿ ರಾಷ್ಟ್ರಜೀವನಕ್ಕೆ ಪರಿಪೂರ್ಣತೆಯನ್ನುಂಟುಮಾಡುವುದು. ವಿಧವಿಧವಾದ ಸಮಾಜಗಳ ಕಟ್ಟುಕಟ್ಟಳೆ, ರೀತಿನೀತಿಗಳನ್ನು ಆಯಾ ಸಮಾಜಗಳು ಬೆಳೆಸಿಕೊಳ್ಳಲು ಆಸ್ಪದವಿದ್ದರೆ ಒಟ್ಟು ರಾಷ್ಟ್ರದ ಶಕ್ತಿ ಕುಂದಲಾರದು. ಈ ಎಲ್ಲ ವೈವಿಧ್ಯಗಳಲ್ಲಿಯೂ ರಾಷ್ಟ್ರದ ಸತ್ತ್ವವೇ ಓಡಾಡುತ್ತಿರುವುದರಿಂದ ಅವು ಪ್ರಕಾಶಕ್ಕೆ ಬಂದರೆ ಹಾನಿ ಸಂಭವಿಸುವುದಾದರೂ ಹೇಗೆ?

ಕಾಗದದ ಮೇಲೊಂದು ಕೆಂಪುಶಾಯಿಯ ಗೆರೆ ಎಳೆದು ರಾಷ್ಟ್ರರಥವನ್ನು ನಡೆಸುತ್ತೇವೆಂದು ಹೇಳುವ ವ್ಯಕ್ತಿಗಳ ಕುರಿತು ಜನ ಎಚ್ಚರದಿಂದಿರಬೇಕು. ನಿರ್ಜೀವವಾದಶಬ್ದ ಸಮುದಾಯಗಳಿಂದ ರಾಷ್ಟ್ರದ

ಜೀವಂತ ಬೇಡಿಕೆಗಳಿಗೆ ಮನ್ನಣೆಸಿಗಲಾರದು. ಎಲ್ಲ ದೇಶದ ರಾಜಧಾನಿಗಳಲ್ಲಿಯೂ ಅಧಿಕಾರಶಾಹಿಯ ವಿಷಮಯ ವಾತಾವರಣಬೆಳೆದು ರಾಷ್ಟ್ರದ ಆಡಳಿತೆಯ ಸಂಸ್ಥೆಗಳಿಗೂ, ಸಾಮಾನ್ಯ ವ್ಯಕ್ತಿಗೂ ನಡುವೆ ಸಂಬಂಧವೇ ಕಡಿದುಹೋಗಿದೆ. ಹಿತ್ತಾಳೆಯ ಬಿಲ್ಲೆಯ ಜೆರ್ಚಪ್ಪಗಳಿಗೂ ಜನ ಬೆದರುವ ಪ್ರಸಂಗ ಬಂದಿರುವುದು ಜನತೆಯಮಾನಕ್ಕೂ, ರಾಷ್ಟ್ರದ ಗೌರವಕ್ಕೂ, ಯೋಗ್ಯವಲ್ಲ. ಭೀತಿ, ಹೀನಾಯಗಳ ಪರಿವೇಷ್ಟಿಯಲ್ಲಿ ಪ್ರಜಾತಂತ್ರವು ಉಸಿರುಕಟ್ಟಿ ಸಾಯುವುದು.

ಪ್ರಜಾತಂತ್ರ ಉಳಿಯಬೇಕಾದರೆ ವಿಕೇಂದ್ರೀಕರಣದ ತತ್ತ್ವವು ರಾಷ್ಟ್ರದ ಎಲ್ಲ ಇಲಾಖೆಗಳಿಗೂ ಹರಡಬೇಕು. ಯಾವ ಪ್ರದೇಶಕ್ಕೆ ಯಾವ ವಿಶಿಷ್ಟವಾದ ಬೇಡಿಕೆ. ಯಾವಾಗ ಉದ್ಭವಿಸುವುದೋ, ಆಗ ಅದನ್ನು ಆದೇ ಪ್ರದೇಶದ ಸಾಮೀಪ್ಯವನ್ನು ಪಡೆದ ಸಂಸ್ಥೆಯೇ ನಿರ್ಧರಿಸಬೇಕಲ್ಲದೆ, ದೂರದ ಫೆಡರಲ್ ಸರಕಾರ ಅದರಲ್ಲಿ ಕೈಯಿಕ್ಕಬಾರದು; ಸ್ಥಾನಿಕ ಸಂಸ್ಥೆಗಳ ಜನರಿಗೂ ಸ್ವತಂತ್ರವಾದ ನಿರ್ಧಾರಕ್ಕೆ ಒಲು ಕೊಂಚವಾದರೂ ಅಧಿಕಾರವನ್ನು ಸಡಿಲು ಬಿಡಬೇಕು. ಅವರು ತೆಗೆದು ಕೊಳ್ಳುವ ಕಾರ್ಯಕ್ರಮದಲ್ಲಿ ಕೇಂದ್ರದ ಇಲಾಖೆಗಳು ಸಹಕರಿಸಬೇಕು. ಒಟ್ಟಾರೆ, ನಿಯಂತ್ರಣದ ಕಡಿವಾಣ ಇಷ್ಟು ಹೊತ್ತು ಬಿಗಿಹಿಡಿದರೂ ಈಗ ಸಡಿಲಿಸಬೇಕು. ಮನಸ್ಸು ಕಾರ್ಯಪರವಾಗುವ ವೇಳೆ ನಿರ್ಬಂಧ ತೊಲಗಿದರೆ ಸ್ವತಂತ್ರವಾಗಿ ಕೈಕಾಲಾಡಿಸುವುದಕ್ಕೆ ಅನುಕೂಲವಾಗುವುದು. ಅಭ್ಯಾಸಬಲದಿಂದ ನಿರ್ಧಾರಕಾರ್ಯದಲ್ಲಿ ಆತ್ಮವಿಶ್ವಾಸವುಂಟಾಗುವುದು. ಅಂಥ ಆತ್ಮವಿಶ್ವಾಸವೇ ವ್ಯಕ್ತಿವಿಕಾಸದ ಸಾಧನ. ವ್ಯಕ್ತಿವಿಕಾಸವೇ ಪ್ರಜಾತಂತ್ರದ ಹೆಗ್ಗುರಿ.

ವಿಕೇಂದ್ರೀಕರಣದಿಂದ ಇಡಿ ರಾಷ್ಟ್ರಕ್ಕೆ ಧಕ್ಕೆ ಸಂಭವಿಸುವುದಿಲ್ಲವೆ? ರಾಷ್ಟ್ರವು ಬೇರೆ ಬೇರೆ ಸ್ವಾರ್ಥಗಳ ಪಾಲಾಗಿ ಹರಿಹಂಚಿಹೋಗುವುದಿಲ್ಲವೆ? ಎಂದು ವಿರೋಧಿಸುವ ಜನರಿದ್ದಾರೆ. ಈ ಸಂಶಯ ನಿವಾರಣೆಗೆ ಟೀವೀಏ ಬೇಕಷ್ಟು ಉದಾಹರಣೆಗಳನ್ನು ನೀಡುವುದು. ಪ್ರಾದೇಶಿಕತೆಗೂ ಸಂಕುಚಿತ ಪ್ರಾಂತೀಯತೆಗೂ, ತುಂಬಾ ಅಂತರವುಂಟು.

ಪ್ರಾಂತೀಯತೆ ರಾಷ್ಟ್ರವಿಭಜನೆಗೆ ನೆರವಾಗಬಹುದು. ಆದರೆ ಪ್ರಾದೇಶಿಕತೆಯು ತನ್ನ ಬೆಳವಣಿಗೆ ಮಾಡಿಕೊಳ್ಳುತ್ತಿರುವಾಗಲೇ ಒಟ್ಟು ರಾಷ್ಟ್ರದ ಹಿತವನ್ನೂ ಸಾಧಿಸುವುದು. (೧) ಪ್ರಾಂತೀಯತೆಗೆ ಬಲಿಬಿದ್ದ ಸ್ವಿಂ. ರಾಷ್ಟ್ರದ ಪ್ರಾಂತಗಳು ಇಷ್ಟು ದಿನವೂ ಫೆಡರಲ್ ಸರಕಾರವನ್ನು ಸಿಕ್ಕಿಸಿಕ್ಕಿದಲ್ಲಿ ವಿರೋಧಿಸುವುದರಲ್ಲಿ ಕಾಲಹರಣಮಾಡಿವೆ. ಪ್ರಾದೇಶಿಕ ಬೆಳವಣಿಗೆಯ ಕಾರ್ಯದಲ್ಲಿ ಫೆಡರಲ್ ಸರಕಾರವೇ ಮುಂದೆ ಬಂದು ಪ್ರತ್ಯಕ್ಷ ನೆರವುನೀಡಿದೆ. ಪ್ರದೇಶದ ಬೇಡಿಕೆಯನ್ನು ಮನ್ನಿಸಿದರೂ ರಾಷ್ಟ್ರದ ಹಿತವೇ ಗುರಿಯಲ್ಲವೆ? (೨) ಟೀವೀಏಯಲ್ಲಿ ಉಪಯೋಗಿಸಲಾದ ವಿಕೇಂದ್ರೀಕೃತ ಫೆಡರಲ್ ಯೋಜನೆಯು ಪ್ರಾದೇಶಿಕ ಹಿತವನ್ನೂ ರಾಷ್ಟ್ರೀಯ ಹಿತವನ್ನೂ ಸಮನ್ವಯ ಮಾಡುವ ಬಗೆಯದು. ಟೆನಸಿ ಪ್ರದೇಶದ ಬೇರೆ ಬೇರೆ ಪ್ರಾಂತ್ಯಗಳ ತೆರಿಗೆಯ ಕ್ರಮವನ್ನು ಪರಿಶೀಲಿಸಿ, ಟೀವೀಏ ಪಡೆದುಕೊಂಡ ಸ್ಥಿರಚರಸೊತ್ತುಗಳ ಮೇಲೆ ಇಡಿಯ ಪ್ರದೇಶ ಯಾವ ದರದಲ್ಲಿ ತೆರಿಗೆ ಕೊಡಬೇಕೆಂಬುದನ್ನು ಬೇರೆ ಬೇರೆ ಪ್ರಾಂತ್ಯಗಳು ಒಪ್ಪುವಂತೆ ನಿಶ್ಚಯಿಸಿ, ಅದರ ಬಗ್ಗಾಗಿ ಟೀವೀಏ ಶಾಸನವನ್ನು ತಿದ್ದುಪಡಿ ಮಾಡಿದುದರಲ್ಲಿ ಪ್ರಾದೇಶಿಕ ರಾಷ್ಟ್ರೀಯ ಹಿತಗಳ ಸಮನ್ವಯವು ಅಡಗಿರುವುದನ್ನು ನೋಡಬಹುದು. ವಿದ್ಯುತ್ತಿನ ಆದಾಯದಿಂದ ಟೀವೀಏ ಈ ಪ್ರಾಂತ್ಯಗಳಿಗೆ ಮೊದಲ ಹತ್ತು ವರುಷಗಳಲ್ಲಿ ಕೊಟ್ಟ ತೆರಿಗೆಯ ಮೊತ್ತ ಸುಮಾರು ಎರಡು ಮಿಲಿಯ ಡಾಲರುಗಳಷ್ಟಾಗಬಹುದು. (೩) ಭಿನ್ನೋದ್ದೇಶಕ ಅಣೆಕಟ್ಟುಗಳು, ನೆರೆನಿಯಂತ್ರಣ, ಕಾನನರಕ್ಷಣೆ, ಸಾರಪಾಲನೆ ಮುಂತಾದ ಕೆಲಸಗಳು ಒಂದು ಪ್ರದೇಶದಲ್ಲಿ ಯಶಸ್ವಿಯಾದರೆ, ಅದೇ ಆದರ್ಶವನ್ನು ರಾಷ್ಟ್ರದ ಉಳಿದೆಡೆಗಳಲ್ಲಿಯೂ ಪರೀಕ್ಷಿಸುವುದಕ್ಕೆ ಅವಕಾಶವಾಗುವುದು. ಒಂದು ಪ್ರದೇಶದ ಯಶಸ್ಸು ಸಮಗ್ರರಾಷ್ಟ್ರದ ಸಮುನ್ನತಿಗೆ ಕಾರಣವಾಗುವುದು. (೪) ಸ್ವಾರ್ಥಮಯವಾದ ಪ್ರಾಂತೀಯತೆಗೂ, ರಾಷ್ಟ್ರೀಯ ಹಿತದ ಪ್ರಾದೇಶಿಕತೆಗೂ ಏನೇನೂ ಸಂಬಂಧವಿಲ್ಲ. ಟೀವೀಏ ಅಧಿಕಾರಿ ವರ್ಗವನ್ನು ಟೀವೀಏ ಪ್ರದೇಶ ಒಂದರಿಂದಲೇ ಅಲ್ಲ; ಇಡಿಯ ಸಂಯುಕ್ತರಾಷ್ಟ್ರದಿಂದ ಆರಿಸಲಾಗಿದೆ. ಸಂಯುಕ್ತ

ರಾಷ್ಟ್ರದಲ್ಲಿ ಯಾರು ಕೇಳಿದರೂ ಟೀವೀಏ ತಜ್ಞರನ್ನು ಎರವಲಾಗಿ ಕೊಡುವುದಕ್ಕೆ ಟೀವೀಏ ಸಿದ್ಧವಾಗಿದೆ. (೫) ಟೀವೀಏ ಸೃಷ್ಟಿಗೊಂಡಾಗಲೀ ಪ್ರಾದೇಶಿಕ ಹಿತವೂ, ರಾಷ್ಟ್ರೀಯ ಉನ್ನತಿಯೂ ಏಕಕಾಲದಲ್ಲಿ ಸಮನಿಸಿತ್ತು. ರೂಸವೆಲ್ಟ್ ಹೇಳಿದ ಹಾಗೆ "ಟೀವೀಏ ಯೋಜನೆಯನ್ನು ಫೆಡರಲ್ ಸರಕಾರ ಕೈಗೊಂಡರೆ ಅದೊಂದು ಮಹಾನ್ ತತ್ತ್ವದ ಪ್ರಯೋಗ ಮಾಡಿದಂತಾಗುವುದು. ಈ ಪ್ರಯೋಗ ಒಂದೋ ಎರಡೋ ಪ್ರಾಂತ್ಯಗಳ ಒಳ್ಳಿತನ್ನು ಮಾತ್ರವೇ ಅಲ್ಲ. ಹಲವಾರು ಪ್ರಾಂತ್ಯಗಳ, ಹಲವಾರು ಬಗೆಯ ಜನಕ್ಕೆ, ಹಲವು ಬಗೆಯಿಂದ ನೆರವಾಗಬೇಕೆಂಬ ಮಹೋದ್ದೇಶವನ್ನು ಕಟ್ಟಿಕೊಂಡಿದೆ. ಟೀವೀಏ ಈ ಯೋಜನೆ ಬರೀ ನಮ್ಮ ಸಲುವಾಗಿ ಮಾತ್ರವೇ ಅಲ್ಲ; ತಲತಲಾಂತರಗಳ ವರೆಗೂ ನಮ್ಮ ಮುಂದಿನ ಜನಾಂಗ ಇದರ ಲಾಭವನ್ನನುಭವಿಸಬಲ್ಲುದು. ಉದ್ದಿಮೆ, ಕೃಷಿ, ಅರಣ್ಯ, ನೆರೆನಿಯಂತ್ರಣ ಎಲ್ಲವನ್ನೂ ಒಂದು ದೃಷ್ಟಿಯಿಂದ ನೋಡಿ, ಎಲ್ಲವನ್ನೂ ಒಂದಕ್ಕೊಂದು ಪೋಷಕವಾಗುವಂತೆ ವೃದ್ಧಿಗೊಳಿಸಿ, ಸುಮಾರು ಒಂದುಸಾವಿರ ಮೈಲಿ ಉದ್ದಕ್ಕೂ ಐಕ್ಯವನ್ನು ಸಾಧಿಸಿ, ಇನ್ನು ಮುಂದೆ ಹುಟ್ಟಲಿರುವ ಎಷ್ಟೋ ಪೀಳಿಗೆಗಳ ಉದ್ಧಾರವನ್ನು ಮಾಡತಕ್ಕ ಮಹಾ ಪ್ರಯೋಗಕ್ಕೆ ಪ್ರಪಂಚದ ಇತಿಹಾಸದಲ್ಲೇ ಒಂದು ಸ್ಥಾನ ದೊರೆಯುವುದು"

ವಿಕೇಂದ್ರೀಕರಣದಿಂದ ಬರುವ ಈ ಬಗೆಯ ಸ್ವಮನ್ವಯ ಮತ್ತು ಐಕ್ಯ ಎಂದರೆ ಏಕರೂಪತೆಯಲ್ಲ ಎಂದು ಇನ್ನೊಮ್ಮೆ ಒತ್ತಿ ಹೇಳಬೇಕಾಗಿದೆ. ವಿಕೇಂದ್ರೀಕರಣದಲ್ಲಿ ವೈವಿಧ್ಯಕ್ಕೆ ಬೇಕಾದಷ್ಟು ಎಡೆ ಇದೆ. ಟೀವೀಏ ಅಣೆಕಟ್ಟುಗಳಲ್ಲಿ ನಡೆದ ಎಲ್ಲಾ ಕೆಲಸವೂ ಒಂದೇ ಮಾದರಿಯಲ್ಲಿ, ಎರಕ ಹೊಯ್ದಂತೆ ನಡೆಯಲಿಲ್ಲ. ಮುಖ್ಯವಾಗಿ ಇಷ್ಟು ಕೆಲಸ ನಡೆಯಬೇಕು ಎಂಬುದನ್ನು ವ್ಯವಸ್ಥಾಪಕರಿಗೆ ತಿಳಿಸಿ, ಕೆಲಸಕ್ಕೆ ಅವರನ್ನೇ ಸಂಪೂರ್ಣ ಹೊಣೆಗಾರರನ್ನಾಗಿ ಮಾಡಿದರೆ, ಕೆಲಸವು ಸುಸೂತ್ರವಾಗಿ ಜರಗುವುದು ಎಂಬುವುದಕ್ಕೆ ಟೀವೀಏ ಒಂದು ಜೀವಂತ ನಿದರ್ಶನ (೧) ಕಾಂಗ್ರೆಸು ಟೀವೀಏಗೆ ಏನುಮಾಡಬೇಕೆಂಬುದನ್ನು ಶಾಸನರೀತ್ಯಾ ಹೇಳಿತೋರಿಸಿತು. (೨) ಏನುಮಾಡಬೇಕೆಂಬುದೊಂದೇ ಅಲ್ಲದೆ ಮೂಲ

ಭೂತವಾದ ಧೋರಣೆಯನ್ನೂ ಕಾಂಗ್ರೆಸು ಹಾಕಿಕೊಟ್ಟಿತು. ಆಡಳಿತೆ
ಯಲ್ಲಿ ಪ್ರಜಾತಂತ್ರದ ಸೂತ್ರವನ್ನನುಸರಿಸತಕ್ಕುದು; ಪ್ರಾಂತೀಯ ವ
ಸ್ಥಾನಿಕ ಸಂಸ್ಥೆಗಳ ಸಹಕಾರವನ್ನು ಆಗಿಂದಾಗ ಕೋರತಕ್ಕುದು; ಆದರೆ
ಈ ಸಹಕಾರವನ್ನು ಯಾವ ನಿಶ್ಚಿತವಿಧಾನದಲ್ಲಿ ಪಡೆಯಬೇಕು? ಎಲ್ಲ
ಸಂದರ್ಭಗಳಲ್ಲೂ ಅದು ಒಂದೇ ಬಗೆಯಾಗಿರತಕ್ಕುದೆ? ಬೇಡವೇ?ಎಂಬು
ದನ್ನು ನಿರ್ಧರಿಸುವ ಜವಾಬುದಾರಿ ಟೀವೀಏಗೆ ಸಲ್ಲುವುದು. (೩) ಇಂತು
ಮಾಡತಕ್ಕ ಕೆಲಸವೇನೆಂಬುದನ್ನೂ, ಅದರಲ್ಲಡಕವಾಗಬೇಕಾದ
ಹೆದ್ದಟ್ಟು ಧೋರಣೆಯನ್ನೂ ಸೂಚಿಸಿದ ಬಳಿಕ ಕಾಂಗ್ರೆಸು ಪ್ರಾದೇಶಿಕ
ಸಾಧನಸಂಪತ್ತಿನ ಬೆಳವಣಿಗೆಯ ಕಾರ್ಯವನ್ನು ಒಂದೇ ಒಂದು
ಸಂಸ್ಥೆಗೆ ಬಿಟ್ಟುಗೊಟ್ಟಿತು. ಬಹುಮುಖವಾದ ಕಾರ್ಯಗಳಿಗೆ ಏಕಮುಖ
ವಾದ ಧೋರಣೆ. ಆ ಧೋರಣೆಯನ್ನು ಅನ್ವಯಿಸಲು ಏಕಾಕಿ ಒಂದು
ಸಂಸ್ಥೆ. ಎಲ್ಲ ಹೊಣೆ ಒಂದು ಸಂಸ್ಥೆಯ ಮೇಲೆ ಬಿದ್ದುದರಿಂದ ಅದು
ನೆಪಹೇಳಿ ತಪ್ಪಿಸಿಕೊಳ್ಳುವಂತಿಲ್ಲ. ಅದರಲ್ಲಿನ ಒಂದು ಇಲಾಖೆ
ಇನ್ನೊಂದು ಇಲಾಖೆಯಮೇಲೆ ತಪ್ಪುಹೊರಿಸುವುದಕ್ಕೆಡೆಯಿಲ್ಲ. (೪)
ಸಾಮಾನ್ಯ ಧೋರಣೆಯಂತೆ ದಿನ ದಿನದ ಕಾರ್ಯಕ್ರಮದ ಹೊಣೆಗಾರಿಕೆ
ಯನ್ನೂ ಅವಿಭಾಜ್ಯವಾಗಿ ಒಂದೇ ಸಂಸ್ಥೆಗೆ ಒಪ್ಪಿಸಿರುವುದು.

ಜನಜೀವನದ ಉನ್ನತಿಯ ಮಹಾಕಾರ್ಯದಲ್ಲಿ ಸ್ಥಾನಿಕಸಂಸ್ಥೆ
ಗಳೂ, ಹಾಗೂ ವ್ಯಕ್ತಿಗಳೂ ನೆರವಾಗುವುದಕ್ಕೆ ಬೇಕಾದ ಅವಕಾಶವ
ನ್ನೊದಗಿಸಿರುವುದು ಟೀವೀಏಯ ಮಹಾಸಾಧನೆ ಎನಲಡ್ಡಿಯಿಲ್ಲ.
ರಾಷ್ಟ್ರದ ಹಿತಸಾಧನೆಗೆ ಸಹಾಯವಾಗುತ್ತಿರುವಾಗಲೇ ವ್ಯಕ್ತಿಯ ಪರಿ
ಪೂರ್ಣ ವಿಕಾಸಕ್ಕೆ ತಕ್ಕುದಾದ ಒಂದು ವಾತಾವರಣವನ್ನು ನಿರ್ಮಿಸಿರು
ವುದು ಕೂಡ ಗಣನೀಯ ಅಂಶವಾಗಿದೆ.

## ಅಧ್ಯಾಯ ಹತ್ತು.

# ಯೋಜನೆಗಳ ಸ್ವರೂಪ.

### ಯೋಜನಾತ್ಮಕ : ಸಮಾಜವಿತಕ್ಕೆ?

ಯೋಜನಾತ್ಮಕ ಸಮಾಜವೆಂದರೆ ಪೂರ್ವಯೋಜನೆಯಿಂದ ನಡೆಯತಕ್ಕ ಸಮಾಜವೆಂದು ಸ್ಥೂಲವಾಗಿ ಪರಿಗಣಿಸಬಹುದು. ಹತ್ತೊಂಭತ್ತನೆಯ ಶತಮಾನದ ಬಂಡವಲುಗಾರ ರಾಷ್ಟ್ರಗಳಲ್ಲಿ ಯೋಜನಾತ್ಮಕ ಸಮಾಜಕ್ಕೆ ಎಡೆ ಇರಲಿಲ್ಲ. ಖಾಸಗೀ ಉದ್ದಿಮೆಗಳ ಉತ್ಕರ್ಷದ ಆ ಕಾಲದಲ್ಲಿ ಯಾವ ವ್ಯಕ್ತಿಯೂ ವ್ಯಾಪಾರ ವ್ಯವಹಾರಕ್ಕಿಳಿದು ಧನಾರ್ಜನೆ ಮಾಡಬಹುದಿತ್ತು. ಔದ್ಯೋಗೀಕರಣ ತೀವ್ರಗತಿಯಿಂದ ಸಾಗುತ್ತಿದ್ದುದರಿಂದಲೂ, ಪ್ರಪಂಚದ ಹೊಸ ಹೊಸ ಭಾಗಗಳು ವ್ಯಾಪಾರವಲಯಕ್ಕೆ ಸೇರುತ್ತಿದ್ದುದರಿಂದಲೂ, ಉತ್ಪಾದನೆಯ ಪ್ರಮಾಣಕ್ಕೂ, ಬೇಡಿಕೆಯ ಪ್ರಮಾಣಕ್ಕೂ, ಹೆಚ್ಚು ತಾರತಮ್ಯ ಉಳಿಯಲು ಶಕ್ಯವಿರಲಿಲ್ಲ. ಹೊಸ ಹೊಸ ಯಂತ್ರಸಾಮಗ್ರಿಗಳ ಆವಿಷ್ಕಾರ ಉಪಯೋಗಕ್ಕೆ ಬಂದಂತೆಯೇ ಹಿಂದಿನಿಂದ ಹೊಸ ಹೊಸ ಮಾರ್ಕೆಟುಗಳ ಶೋಧವೂ ನಡೆದುದರಿಂದ ಉತ್ಪಾದಿತಸಾಮಗ್ರಿಗಳು ಉಳಿಯುತ್ತಿದ್ದಿಲ್ಲ. ಉದ್ದಿಮೆಗಳು ತಲೆಯೆತ್ತುವುದರಲ್ಲಿ ಒಂದು ಕ್ರಮ, ಅವುಗಳ ಹರಡುವಿಕೆಯಲ್ಲಿ ಒಂದು ಉದ್ದೇಶ, ಯಾವುದಿಲ್ಲವಾದರೂ ವಿಪರೀತವಾಗಿ ಬೆಳೆಯುತ್ತಿದ್ದ ಮಾರ್ಕೇಟುಗಳಿಂದಾಗಿ ಯಾವ ಅವ್ಯವಸ್ಥೆಯೂ ಗೋಚರಕ್ಕೆ ಬರುವಂತಿರಲಿಲ್ಲ. ಹೊಸ ಖಂಡಗಳ ಶೋಧ ನಿಂತಾಗಲೂ, ಉತ್ಪಾದನೆಗೆ ಒಂದು ಮಿತಿಯುಂಟಾದಾಗಲೂ, ಬಂಡವಲುಗಾರ ಯಂತ್ರ ಸರ್ವನಿಯಾಮಕವಲ್ಲವೆಂದೂ, ಬಂಡವಲುಗಾರ ಸಮಾಜವೇ ಸತ್ಯವೆಂದೂ, ತಿಳಿಯಲವಕಾಶವಾಯಿತು. ಈ ತಿಳುವಳಿಕೆ ಒಮ್ಮಿಂದೊಮ್ಮೆ, ಹಠಾತ್ತಾಗಿ, ಆವಿರ್ಭವಿಸಿದ ಮುಗ್ರಹವೆಂದು ಯಾರೂ ಎಣಿಸಬಾರದು. ಬಂಡವಲುಗಾರ ಸಮಾಜದ ಅಂತರ್ಯದಲ್ಲೇ ಒಳಗಿಂದೊಳಗೆ ಬೆಳೆಯುತ್ತಿದ್ದ ಅಸಮಾಧಾನದ ರೂಪಕವಾಗಿ ಯೋಜನಾತ್ಮಕ ಸಮಾಜದ ಕುರಿತು ಜನ ಯೋಚಿಸಲಾರಂಭಿಸಿತು. ಬಿಡುಗಡೆ ಹೊಂದಿದ ರಶಿಯಾದ ಪಂಚ

ವಾರ್ಷಿಕಯೋಜನೆಗಳ ಅದ್ಭುತ ಪರಿಣಾಮ ಯೋಜನಾತ್ಮಕ ಸಮಾಜಕ್ಕೆ ಮಂಗಲ ಗೀತವನ್ನು ಹಾಡಿತು. ರಶಿಯಾ ಉತ್ಪಾದನೆಯ ಅಂಕೆಸಂಖ್ಯೆಗಳನ್ನು ಬೆಳೆಸಿಕೊಳ್ಳುತ್ತಿದ್ದ ಕಾಲದಲ್ಲಿಯೇ ಸ್ವಹಾಸದಿಂದ ಬಲಗೊಳ್ಳುತ್ತಿದ್ದ ಸಂಯುಕ್ತ ರಾಷ್ಟ್ರದ ಸಮಾಜದ ದುರ್ದೆಶೆಯನ್ನು ಕೆಳಗಿನ ಅಂಕೆಸಂಖ್ಯೆಗಳಿಂದ ಗೊತ್ತುಹಚ್ಚಬಹುದು.

## ಯೋಜನಾರಹಿತ ಸಮಾಜದ ದುರ್ಗತಿ.

ಸ್ಟ್ಯಾಲಿನ್ ಪ್ರಭೃತಿ ೧೯೩೪ರಲ್ಲಿ ಸೋವಿಯೆಟ್ ಭೂಮಿಯ ೧೭ನೆಯ ಪಾರ್ಟಿ ಅಧಿವೇಶನಕ್ಕೆ ಒಪ್ಪಿಸಿದ ವರದಿಯಲ್ಲಿ, "ಒಂದನೆಯದಾಗಿ, ಔದ್ಯೋಗಿಕ ಗಂಡಾಂತರವು ಬಂಡವಲುಗಾರ ರಾಷ್ಟ್ರಗಳಲ್ಲಿ ಒಂದನ್ನೂ ಬಿಡದೆ ಹಬ್ಬಿರುವುದರಿಂದ, ಅವುಗಳಲ್ಲೊಂದು ದೇಶ ಇನ್ನೊಂದನ್ನು ಉಪಾಯದಿಂದ ಸೋಲಿಸಿ ಲಾಭಪಡೆಯುವ ಸಂದರ್ಭವಿಲ್ಲ. ಔದ್ಯೋಗಿಕ ಗಂಡಾಂತರವು ಕೃಷಿವಿಭಾಗದ ಸಂದಿಗ್ಧದ ದೆಸೆಯಿಂದ ಇನ್ನಷ್ಟು ಉತ್ತೇಜಿತವಾಗಿ ಪರಿಸ್ಥಿತಿ ಮತ್ತಷ್ಟು ಗಂಭೀರವಾಗುವುದು. ಮೂರನೆಯದಾಗಿ, ಕೃಷಿರಾಜ್ಯದ ಗಂಡಾಂತರ ಕೃಷಿಯ ಯಾವ ಅಂಗಾಂಗವನ್ನೂ ಬಿಟ್ಟಿಲ್ಲ. ಯಂತ್ರಗಳಿಂದ ಕೈಕೆಲಸಕ್ಕೆ, ಟ್ರಾಕ್ಟರಿನಿಂದ ಎತ್ತುಕೋಣಗಳಿಗೆ ಪುನರಾವರ್ತನೆಯಾಗಿರುವುದು ಬಹಳ ವಿಚಿತ್ರವೆನಿಸಿದರೂ, ಕಟುವಾದ ಸತ್ಯವಾಗಿದೆ. ಇವೆಲ್ಲ ಕಾರಣಗಳಿಂದ ಔದ್ಯೋಗಿಕ ಪರಿಸ್ಥಿತಿ ತೀರ ಕೆಡುವುದು. ನಾಲ್ಕನೆಯದಾಗಿ, ಮುಖ್ಯಮುಖ್ಯ ಉತ್ಪನ್ನಗಳ ಗುತ್ತಿಗೆಯನ್ನು ಪಡೆದ 'ಕಾರ್ಟೆಲ್' ಸಂಘಗಳು ಉತ್ಪನ್ನದ ಬೆಲೆಯನ್ನು ಹೆಚ್ಚಿಸಲು ಯತ್ನಿಸುವುದರಿಂದ, ಉತ್ಪನ್ನ ಸಾಮುಗ್ರಿಗಳು ಖರ್ಚಾಗುವುದು ದುಸ್ತರವಾಗುವುದು. ಐದನೆಯದಾಗಿ, ಬಂಡವಲುಶಾಹಿಯ ಈ ಕೊಳಕು ಬರಿಯ ಉತ್ಪಾದನೆ, ವ್ಯಾಪಾರಕ್ಷೇತ್ರಗಳಲ್ಲಿ ಮಾತ್ರವಲ್ಲದೆ ಪ್ರಪಂಚದ ಸಾಲಪದ್ಧತಿ, ಪರದೇಶಿ ಎಕ್ಸ್‌ಛೇಂಜು, ಬೋಂಡ್ ಮಾರ್ಕೆಟುಗಳಿಗೂ ವ್ಯಾಪಿಸಿದೆ. ಕಾರ್ಟೆಲ್‌ಗಳು ಅದೆಷ್ಟು ಯತ್ನಿಸಿದರೂ ದರದ ಏರಿಕೆಯನ್ನು ಉಳಿಸಿಕೊಳ್ಳಲಾಗಲಿಲ್ಲ. ವಸ್ತುಗಳದರ ಒಂದರ ಹಿಂದೊಂದು ಇಳಿದು, ಸಾಲಗಾರರ ಕಷ್ಟ ಅತಿಯಾಯಿತು. ಸಾಲಿಗ

ರಾಷ್ಟ್ರಗಳು ಇದರಿಂದ ಅನುಚಿತ ಲಾಭ ಪಡೆಯಲು ಯತ್ನಿಸಿದುವು ಇದರಿಂದಾಗಿ ಎಷ್ಟೋ ಅಂಗಡಿಗಳೂ, ಖಾಸಗೀ ಉದ್ದಿಮೆದಾರರೂ, ಕೊಡುಬಂಡವಲಿನ ಸಂಸ್ಥೆಗಳೂ ದಿವಾಳಿ ತೆಗೆದುವು. ನಾಣ್ಯದ ಬೆಲೆಯು ಇಳಿತಾಯದಿಂದ ಕೊಂಚ ಕಾಲ ಪರಿಹಾರ ದೊರಕಿದರೂ, ಬಂಡವಲುಗಾರ ರಾಷ್ಟ್ರಗಳಿಗೆ ಸಾಲತೀರಿಸಲನುಕೂಲವಾಗಲಿಲ್ಲ- ಒಂದು ದೇಶದಿಂದ ಇನ್ನೊಂದಕ್ಕೆ ಬಂಡವಲು ಹರಿಯುವುದು ನಿಂತಿತು. ವ್ಯಾಪಾರ ವಹಿವಾಟು ಇಳಿಮುಖವಾಯಿತು; ಪರದೇಶದ ಮಾರ್ಕೆಟುಗಳಿಗಾಗಿ ಬಡಿದಾಟ ಆರಂಭವಾಯಿತು. ವ್ಯಾಪಾರ ಯುದ್ಧಗಳು ಜರಗಿದುವು. ಇವೆಲ್ಲ ಕಾರಣಗಳಿಂದ ಪರಿಸ್ಥಿತಿ ಜಟಿಲತರವಾಯಿತು" ಎಂದು ಹೇಳಿರುವುದು ಯೋಜನಾರಹಿತವೂ, 'ಸರ್ವತಂತ್ರಸ್ವತಂತ್ರವೂ' ಆದ ಸಮಾಜದ ದುರ್ಗತಿಯನ್ನು ವಿವರವಾಗಿ ಬಣ್ಣಿಸುವುದು.

## ಔದ್ಯೋಗಿಕ ಉತ್ಪನ್ನದ ಪ್ರಮಾಣ.

(೧೯೨೯ರಲ್ಲಿನ ನೂರಕ್ಕೆ)

| | ೧೯೨೯ | ೧೯೩೦ | ೧೯೩೧ | ೧೯೩೨ | ೧೯೩೩ |
|---|---|---|---|---|---|
| ಸೋವಿಯಟ್ ರಶಿಯಾ ... ... | ೧೦೦ | ೧೨೯·೭ | ೧೬೧.೯ | ೧೮೪·೭ | ೨೦೧.೬ |
| ಸಂಯುಕ್ತ ರಾಷ್ಟ್ರ ... ... ... | ೧೦೦ | ೮೦·೭ | ೬೮·೧ | ೫೩·೮ | ೬೪·೯ |
| ಗ್ರೇಟ ಬ್ರಿಟನ ... ... ... | ೧೦೦ | ೯೨·೪ | ೮೩·೮ | ೮೩·೮ | ೮೬·೧ |
| ಜರ್ಮನಿ ... ... ... ... | ೧೦೦ | ೮೮·೩ | ೭೧·೭ | ೫೯·೮ | ೬೬·೮ |
| ಫ್ರಾನ್ಸ ... ... ... ... | ೧೦೦ | ೧೦೦·೭ | ೮೯·೨ | ೬೯·೧ | ೭೭·೪೧ |

ಇಲ್ಲಿ ರಶಿಯಾದ ಉತ್ಪಾದನೆ ನೂರಕ್ಕೆ ನೂರರಷ್ಟು ಏರಿದಾಗಲೇ ಬಂಡವಲುಗಾರ ರಾಷ್ಟ್ರಗಳಲ್ಲಿ ನೂರಕ್ಕೆ ಇಪ್ಪತ್ತರಿಂದ ನಲ್ವತ್ತರ ವರೆಗೆ ಉತ್ಪಾದನೆಯಲ್ಲಿ ಕೊರತೆ ಬಿದ್ದುದನ್ನು ಗಮನಿಸಬೇಕು. ಇಡಿಯ ಪ್ರಪಂಚವೇ ಮುಂದಿಯ ದವಡೆಯೊಳಗೆ ಸಿಕ್ಕಿ ಒದ್ದಾಡುತ್ತಿರುವ ಕಾಲದಲ್ಲಿಯೇ ರಶಿಯಾದ ಉತ್ಪಾದನಾ ಸಾಮರ್ಥ್ಯ ಹೆಚ್ಚಿತು. ವ್ಯಾಪಾರ ವಹಿವಾಟುಗಳಲ್ಲಿ ಮುಂದೆನಿಸಿದ ಒಂದೆರಡು ರಾಷ್ಟ್ರಗಳಲ್ಲಿ ಆರಂಭವಾದ

ಮುಂದಿ ಕೆಲವೇ ಕಾಲದಲ್ಲಿ ಸರ್ವವ್ಯಾಪಿಯಾಗಿ, ಜಗದಗಲ ಹಾಹಾಕಾರ ವೆಬ್ಬಿಸಿದರೂ ರಶಿಯಾದ ಕೂವಲು ಕೊಂಕಿಸುವುದೂ ಅದರಿಂದಾಗಲಿಲ್ಲ. ಇದಕ್ಕೆ ರಶಿಯಾದಲ್ಲಿ ಆಗತಾನೇ ಅನುಸರಿಸಿದ ಯೋಜನಾಪದ್ಧತಿಯೇ ಕಾರಣವೆಂದು ಹೇಳಲಡ್ಡಿ ಇಲ್ಲ.

೧೯೨೯ರಿಂದ ೩೮ರ ವರೆಗಿನ ಜಾಗತಿಕ ಮುಂದಿಯಲ್ಲಿ ರಶಿಯಾ ಭಾಗ ವಹಿಸದೆ ಪ್ರಗತಿಪಥದಲ್ಲಿ ಮುಂಬರಿಯುತ್ತಿರುವುದನ್ನು ಕೆಳಗಿನ ಅಂಕೆ ಸಂಖ್ಯೆಗಳಿಂದ ಗೊತ್ತುಹಚ್ಚಬಹುದು.

## ಆಹಾರ ಧಾನ್ಯ ಮತ್ತು ಉದ್ದಿಮೆಗೆ ಬೇಕಾಗುವ ಧಾನ್ಯಗಳ ಒಟ್ಟು ಉತ್ಪಾದನೆ.

ಮಿಲಿಯ ಸೆಂಟನರುಗಳಲ್ಲಿ.

| | ೧೯೧೩ | ೧೯೩೪ | ೧೯೩೫ | ೧೯೩೬ | ೧೯೩೭ | ೧೯೩೮ | ೧೯೧೩ಕ್ಕೆ ಹೋಲಿಕೆ (%) |
|---|---|---|---|---|---|---|---|
| ಆಹಾರ ಧಾನ್ಯ... | ೮೦೧·೦ | ೧೯೪·೦ | ೯೦೧·೦ | ೮೨೭·೩ | ೧೨೦೭·೯ | ೯೪೯·೯ | ೧೧೮·೬ |
| ಹತ್ತಿ ... ... | ೭.೪ | ೧೧·೮ | ೧೭.೨ | ೨೩·೯ | ೨೫·೮ | ೨೬·೯ | ೩೬೩·೫ |
| ಫ್ಲ್ಯಾಕ್ಸ್‌ನಾರು | ೩·೩ | ೫·೩ | ೫·೫ | ೫·೮ | ೫·೭ | ೫·೪೬ | ೧೬೫·೭ |
| ಬೀಟ್ ಸಕ್ಕರೆ... | ೧೦೯·೦ | ೧೧೩·೬ | ೧೬೨·೧ | ೧೬೮.೩ | ೨೧೮·೬ | ೧೬೬·೮ | ೧೫೩·೦ |
| ಎಣ್ಣೆಕಾಳು ... | ೨೧·೫ | ೩೬·೯ | ೪೨·೭ | ೪೨·೩ | ೫೧·೧ | ೪೬·೬ | ೨೧೬·೭ |

## ವ್ಯಾಪಾರ.

| (ಮಿಲಿಯರೂಬಲ್) | ೧೯೩೩ | ೧೯೩೫ | ೧೯೩೭ | ೧೯೩೮ | ೧೯೩೩ಕ್ಕೂ ೩೮ ಹೋಲಿಕೆ |
|---|---|---|---|---|---|
| ರಾಷ್ಟ್ರದ ಮತ್ತು ಸಹಕಾರಿ ಸಂಘದ ಚಿಲ್ಲರೆ ವ್ಯಾಪಾರ. | ೪೯೭೮೯·೨ | ೮೧೭೧೨ | ೧೨೫೯೪೩ | ೧೩೮೫೭೪ | ೨೭೮·೦೩. |
| ಸಾಮೂಹಿಕ ಹೊಲಗಳ ಸಂತೆಯಲ್ಲಿ ನಡೆದ ವ್ಯಾಪಾರ. | ೧೧೫೦೦ | ೧೪೫೦೦ | ೧೭೭೯೯ | ೨೪೩೯೯ | ೨೧೨·೨ |

ಹೊಲ, ಕಾರಖಾನೆ, ಗನಿಗಳ ಒಡೆತನ ಖಾಸಗಿ ವ್ಯಕ್ತಿಗಳದಾಗಿದ್ದರೆ ಆ ಪದ್ಧತಿಗೆ ಬಂಡವಲುಗಾರ ಪದ್ಧತಿ ಎನ್ನುತ್ತೇವಷ್ಟೆ. ಇದರಲ್ಲಿ ಯಾವ ಬಗೆಯ ಒಡೆತನವೂ ಇಲ್ಲದ ಜನ ಉತ್ಪಾದನೆಯ ಸಾಧನಗಳನ್ನು ನಡೆಯಿಸಿ ಬಂಡವಲುಗಾರರಿಗೆ ಲಾಭ ತರುತ್ತಾರೆ. ಲಾಭದ ನಿರೀಕ್ಷೆಯಿರುವುದರಿಂದಲೇ ಮಾಲಿಕವರ್ಗ ಕಾರ್ಮಿಕರಿಗೆ ಸಾಧನ ಸಂಪತ್ತನ್ನು ಉಪಯೋಗಿಸಲು ಬಿಡುವುದು. ಲಾಭಮಾಡುವುದು ಬಂಡವಲುಗಾರಿಕೆಯ ಉತ್ಪಾದನೆಗೆ ಪ್ರೋತ್ಸಾಹವಷ್ಟೇ ಅಲ್ಲ, ಇಡಿಯ ಉತ್ಪಾದನೆಯ ಇಹಪರಗಳನ್ನು ನಿರ್ಣಯಿಸುವಂತಹುದೂ ಆಗಿರುವುದು. ಉತ್ಪಾದನೆಯ ಕಾರ್ಯ ನಡೆಯಬೇಕೋ, ಲಾಭ ಬಂದೇ ತೀರಬೇಕು. ಲಾಭ ತರುವಂತಹ ವಸ್ತುಗಳ ತಯಾರಿಗೆ ಮಾತ್ರ ನಡೆದೀತು. ಲಾಭವಿಲ್ಲದ ವಸ್ತುಗಳ ತಯಾರಿಕೆ ಯಾರಾವರೂ ಕೈಕೊಟ್ಟರೆ ಅವನಿಗೆ ಸಾಧನಸಂಪತ್ತಿನ ಮೇಲೆ ಒಡೆತನವು ತಪ್ಪಿಹೋಗಿ, ದಿವಾಳಿಯಾಗಿ, ಆತ ಭಿಕಾರಿಯಾಗುವುದರಿಂದ, ಒಂದು ವಸ್ತ್ರ ತಯಾರಿಸಲ್ಪಡುವದೇ ಇಲ್ಲವೇ ಎಂಬುದನ್ನು ಲಾಭದ ಒರೆಗಲ್ಲೇ ನಿರ್ಣಯಿಸುವುದು. ಬೇಡಿಕೆ ಎಲ್ಲಿ ಉಂಟೋ ಅಲ್ಲಿ ಲಾಭವುಂಟು; ಎಲ್ಲಿ ಲಾಭ ಉಂಟೋ ಆ ಕಡೆಗೆ ಉತ್ಪಾದನೆ ಒಲಿಯುತ್ತದೆ. ಯಾವವಸ್ತುವಿಗೆ ಬೇಡಿಕೆ ಇಲ್ಲವೋ ಅದರಲ್ಲಿ ಲಾಭವಿಲ್ಲ. ಆದ್ದರಿಂದ ಆ ವಸ್ತು ತಯಾರಾಗುವುದೂ ಇಲ್ಲ. ಅಂದರೆ ಬೇಡಿಕೆಯಲ್ಲಿರುವ ವಸ್ತುಗಳು ಯಂತ್ರವತ್ ತಮ್ಮಿಂದ ತಾವೇ ಉತ್ಪಾದಿಸಲ್ಪಡುತ್ತವಲ್ಲವೆ? ಹೆಚ್ಚು ಜನರು ಯಾವ ವಸ್ತುವನ್ನು, ಹೆಚ್ಚು ಹೆಚ್ಚಾಗಿ ಬೇಕೆನ್ನುತ್ತಾರೋ ಅವೇ ತಯಾರಾಗುವ ಉತ್ಪಾದನೆಯ ಪದ್ಧತಿಯಲ್ಲಿ ದೋಷವೇನು? ಇಂಥ ಅದ್ಭುತವಾದ ಪರಿಣಾಮ ಬೇರಾವ ಆರ್ಥಿಕ ಪದ್ಧತಿಯಿಂದ ಸಾಧಿಸೀತು? ಎಂದು ಬಂಡವಲುಗಾರಿಕೆಯ ಹಿತವಾದಿಗಳು ವಾದಿಸುತ್ತಾರೆ. ಆದರೆ ಈ ತಾತ್ತ್ವಿಕವಾಗಿ ಉಂಟಾಗಲೇ ಬೇಕಾದ ಅದ್ಭುತ ಪರಿಣಾಮ ಯಥಾರ್ಥವಾಗಿ ಮೂಡದಿರುವುದನ್ನು ಎಲ್ಲರೂ ಒಪ್ಪಿಕೊಳ್ಳಬೇಕಾಗುವುದು. ಕೆಲವು ಶ್ರೀಮಂತರ ಹುಚ್ಚು ಬೇಡಿಕೆಯ ವಿಲಾಸ ಸಾಮಗ್ರಿಗಳು ತಯಾರಾಗುತ್ತವಲ್ಲದೆ, ಅವಕ್ಕುಪಯೋಗಿಸುವ ಸಾಧನ ಸಂಪತ್ತನ್ನು ಜೀವನ ನಿರ್ವಾಹಕ್ಕಾಗಿ ಬ್ರೆಡ್ಡು, ಬಟ್ಟೆ, ತಯಾರಿಸುವು

ವಕ್ಕೆ ಉಪಯೋಗಿಸುತ್ತಿಲ್ಲ. ಎಂಬುದು ೧೯೨೫ರಿಂದ ೧೯೩೯ರ ವರೆಗಿನ ಜಾಗತಿಕ ಸತ್ಯ. ಹೇರಳ ಬೇಡಿಕೆ ಇರುವುದು ಬ್ರೆಡ್‌ಬೆಣ್ಣೆಗೆ; ತಯಾರಾರಾಗುವುದು ಆಸ್ಟಿನ್ ಮೋಟಾರುಕಾರು! ಏಸುಪ್ರಭು ಹೇಳಿದ "ಅವರು ರೊಟ್ಟಿಬೇಡಿದರೆ ನೀನು ಕಲ್ಲುಕೊಡಬೇಡ" ಎಂಬ ಉಪದೇಶದ ವಿಪರ್ಯಾಸಕ್ಕೆ ಬೇರೆ ಪುರಾವೆ ಬೇಕೆ? ಅಂತೂ ಉತ್ಪಾದನೆಯುನ್ನು ಅನಗತ್ಯವೂ, ಅನುಚಿತವೂ, ಆದ ದಾರಿಯಲ್ಲೊಯ್ಯುವುದು ಬಂಡವಲುಗಾರಿಕೆಯ ಚಟವಾಗಿ ಬಿಟ್ಟಿದೆ. ಅಷ್ಟುಮಾತ್ರವೇ ಅಲ್ಲದೆ ಕಾಲಕಾಲಕ್ಕೆ ಶ್ರೀಮಂತರಿಗೆ ಅಗತ್ಯವಿಲ್ಲದ, ಮತ್ತು ಬಡವರು ಕೊಂಡುಕೊಳ್ಳಲಸಾಧ್ಯವಾದ ಹಲವಾರು ವಸ್ತುಗಳ ತಯಾರಿಕೆ ನಡೆದು, ಕಟ್ಟಕಡೆಗೆ ಅವುಗಳನ್ನು ನೀರಿಗೆ ಚೆಲ್ಲುವಂಥ ಪ್ರಸಂಗ ಬರುವುದೂ ಉಂಟು. ಕೋಟ್ಯಂತರ ಜನ ಹೊಟ್ಟೆಗಿಲ್ಲದೆ ನರಳುತ್ತಿರುವಾಗಲೇ, ಆಹಾರ ವಸ್ತುಗಳನ್ನು ಬೆಂಕಿಕೊಟ್ಟೋ, ಸಮುದ್ರಕ್ಕೆ ಚೆಲ್ಲಿಯೋ ಹಾಳುಮಾಡುವ ದುಷ್ಕಾಲ ಬರುವುದು ಬಂಡವಲುಗಾರಿಕೆಯ ಮಂದುಮೆಚ್ಚಕ್ಕೆ ಸಾಕ್ಷಿಯಾಗಿದೆ. ಮಂದಿಯಕಾಲ ಆರಂಭವಾಗುವುದರ ಮೊದಲು ಸಂಯುಕ್ತ ರಾಷ್ಟ್ರದ ಉತ್ಪಾದನಾ ಸಾಮರ್ಥ್ಯ ತುತ್ತ ತುದಿಯನ್ನು ಮುಟ್ಟಿತೆಂದು ನಂಬುವ ಜನ ಇದ್ದಾರಾದರೂ, ನಿಜವಾಗಿ ಆಗ ಅಮೇರಿಕನ್ ಜನ ತಮ್ಮ ಉತ್ಪಾದನಾ ಸಾಮರ್ಥ್ಯದ ೮೧%ಗಿಂತ ಹೆಚ್ಚು ಉಪಯೋಗ ಪಡೆಯಲಿಲ್ಲ. ೧೯೩೦-೩೧-೩೨-೩೩ರಲ್ಲಿ ಬರಿಯ ೫೦% ಉಪಯೋಗಿಸುವಷ್ಟು ಹೀನಸ್ಥಿತಿಗೆ ಅವರು ಇಳಿಯಬೇಕಾಯಿತು. ಅಂದರೆ ಎಷ್ಟು ಮೂಲಸಾಮಗ್ರಿಗಳಿಗೂ, ಎಷ್ಟು ಕೆಲಸಗಾರರಿಗೂ, ನಿರುದ್ಯೋಗವುಂಟಾಯಿತು? ಬ್ರಿಟನ್ ಒಂದರಲ್ಲೇ ಹತ್ತು ಮಿಲಿಯಕ್ಕೂ ಮೇಲ್ಪಟ್ಟ ನಿರುದ್ಯೋಗಿಗಳಿದ್ದರಂತೆ. ಈ ನಿರುದ್ಯೋಗ, ನಿರುಪಯೋಗ, ದುರುಪಯೋಗಗಳನ್ನು ಎಷ್ಟು ಬಣ್ಣಿಸಿದರೂ ಸಾಲದು.

ಇಂಥ ಕಣ್ಣುಕುಕ್ಕುವ ಸತ್ಯಾಂಶಗಳಿದ್ದರೂ ಅವನ್ನಲ್ಲಗಳೆದು, ಬಂಡವಲುಗಾರಿಕೆಯನ್ನು ಪುನಃ ಪ್ರತಿಷ್ಠಾಪಿಸಿದರೇನೆ ಲೋಕೋದ್ಧಾರವೆಂದು ಹೇಳುವ ಬ್ರಿಟನಿನ ಕನ್‌ಸರ್ವೇಟಿವ್ ಪಕ್ಷದ ಸಿದ್ಧಾಂತಿ ಕ್ವಿಂಟಿನ್ ಹೊಗ್‌ನಂಥ ಜನ ಇನ್ನೂ ಇದ್ದಾರೆ. ಮಿಸ್ಟರ್ ಹೊಗ್‌ನ ಮಾತನ್ನು ತುಸು ಆಲಿಸೋಣ. "ಬಡತನಕ್ಕೆ ಕಾರಣವೇನೆಂದು ಆಡಂಸ್ಮಿಥ್ ಕೇಳಿ

ದ್ದಾನೋ? ಇಲ್ಲ. ಏಕೆಂದರೆ ಬಡತನಕ್ಕೆ ಕಾರಣವೇ ಇಲ್ಲ. ಮೂಲವೆ ಇಲ್ಲ. ಅದು ಮಾನವಜನಾಂಗದ ಆದ್ಯ ಪರಿಸ್ಥಿತಿ. ನಾವು ಬತ್ತಲೆಯಾಗಿ ಭೂಮಿಗೆ ಬಂದಿದ್ದೇವೆ. ಹಣ್ಣುಹಂಪಲು ತಿಂದು ಶತಮಾನಗಳ ಕಾಲ ಕಳೆದಿದ್ದೇವೆ. ಅಲ್ಲಿಂದ ಕೃಷಿಗೆ ತೊಡಗಿದೆವು. ಆ ಮೇಲೆ ಔದ್ಯೋಗೀಕರಣ ಆರಂಭವಾಯಿತು. ಒಂದೊಂದು ಹಂತವೂ ನಮ್ಮ ಉನ್ನತಿಸೂಚಕವಾಗಿದ್ದು ಔದ್ಯೋಗಿಕ ಯುಗದಲ್ಲಿ ನಮ್ಮ ಬಾಳುವೆ ಮತ್ತಷ್ಟು ಸುಗಮವಾಗಿದೆ. ಉತ್ಪಾದನೆ ಹೆಚ್ಚಿದೆ. ರೋಗರುಜಿನ ಕಡಮೆಯಾಗಿದೆ. ದುಡಿತನ ಅಂಶವೂ ಎಷ್ಟೋ ಕಡಮೆಯಾಗಿದೆ. ಹೌದು, ಒಮ್ಮೊಮ್ಮೆ ಪುನಃ ನಮ್ಮ ಆದ್ಯಪರಿಸ್ಥಿತಿಗೆ ನಾವು ಹಿಂದೆ ಹೋಗುವುದುಂಟು. ಬಂಡವಲುಗಾರಿಕೆಯ ಹೃದಯಸ್ತಂಭನವಾಗುವುದುಂಟು. ನಿರುದ್ಯೋಗಕ್ಕೆ ಲೋಕ ಬಲಿಯಾಗುತ್ತದೆ. ಆಗ ಬಂಡವಲುಗಾರಿಕೆಯ ಯಂತ್ರ ತಟಸ್ಥವಾಗಿರುವುದರಿಂದಲೇ ಜನ ಮರಳಿ ಮಧ್ಯಯುಗದ ಆರ್ಥಿಕ ಸಂಕಟಕ್ಕೀಡಾಗುತ್ತಾರೆ'' ಮಿಸ್ಟರ್ ಹೊಗ್ ಹೇಳಿದ ಮಾತಿನಲ್ಲಿ ಸತ್ಯಾಂಶ ಇಲ್ಲವೆ ಇಲ್ಲ. ಆದರೆ ಬಡತನವೇ ನಮ್ಮ ಮೂಲದ ಪರಿಸ್ಥಿತಿ, ನಾವು ಒಮ್ಮೊಮ್ಮೆ ಅಪ್ಪಿ ತಪ್ಪಿ ಈಗಲೂ ಅದಕ್ಕೆ ಬೀಳುತ್ತೇವಷ್ಟೇ, ಎಂಬ ಧೋರಣೆ ವಿಚಾರಣೀಯವಾಗಿದೆ. ''ಒಮ್ಮೊಮ್ಮೆ'' ಉಂಟಾಗತಕ್ಕ ಇಂಥ ದುಃಸ್ಥಿತಿ ಪ್ರಪಂಚದಲ್ಲಿ ನಿಯತಕಾಲಿಕವಾಗಿ-ಹತ್ತುವರ್ಷಗಳಿಗೊಮ್ಮೆ ಎಂದು ಹೆದ್ದಟ್ಟಾಗಿ ಕಟ್ಟಿಕೊಳ್ಳಬಹುದು- ಏಕೆ ಸೃಷ್ಟಿಯಾಗುತ್ತಿದೆ? ಒಂದೈದು ವರುಷ ವ್ಯಾಪಾರ ಉದ್ದಿಮೆಗಳ ಭರತ, ಆ ಮೇಲೆ ಏಳೆಂಟು ವರುಷ ಇಳಿತ- ಹೀಗೆ ಜನಜೀವನವನ್ನು ಉಲ್ಲೋಲಕಲ್ಲೋಲಮಾಡುವ ದುಃಸ್ಥಿತಿ ಉತ್ಪನ್ನವಾಗುವುದನ್ನು ಕಣ್ಣಾರೆ ಕಂಡೂ ಅಷ್ಟು ಸುಲಭದಲ್ಲಿ ತೇಲಿಸಿ ಬಿಡಬಹುದೆ? ಉಬ್ಬರದ ಕಾಲದಲ್ಲಿ ತೋರಿಕೆಗೆ ಏನೋ ಜನಜೀವನದ ಮಟ್ಟ ಸುಧಾರಿಸಿದಂತೆ ಕಂಡರೂ ಅನ್ಯಾಯದ ವಿತರಣೆ ಆಗಲೂ ಒಂದೇ ಸಮನೆ ನಡೆಯುತ್ತಿರುವುದಲ್ಲವೆ? ಅಲ್ಲದೆ ಈ ಸುಧಾರಣೆಯ ಬೆನ್ನ ಹಿಂದೆ ಬರುವ ಮುಂದಿಯ ದುಷ್ಪರಿಣಾಮವನ್ನು ತಿಳಿದೂ ತಿಳಿದೂ ಜನ ಎಷ್ಟುಕಾಲ ಸಹಿಸಬಲ್ಲುದು? ಯಾರು? ಏನು? ಎಲ್ಲಿ? ಎಂದು ಅರಿವಾಗುವ ಮೊದಲೇ ಬಿರುಗಾಳಿಯಂತೆ ಬಂದು, ಜನರ ಹೊಟ್ಟೆಗೆ ಬೆಂಕಿ

ಹೆಚ್ಚಿಹೋಗುವ ಉತ್ಪಾತಕ್ಕೆ ಜನ ಎಷ್ಟುಕಾಲ ಸಹಿಸಿಕೊಂಡಿರಬೇಕೋ, ಈ ಅಸಹಾಯ ಪರಿಸ್ಥಿತಿ ಕೊನೆಗಾಣುವುದೆಂದಿಗೋ, ಎಂದುಜನ ಕಾತರಿಸಿದರೆ ಅದರಲ್ಲಿ ತಪ್ಪೇನು? ಒಂದು ಪೂರ್ವಯೋಚನೆಯಿಲ್ಲದೆ ತಾನಾಗಿ, ಸರ್ವತಂತ್ರಸ್ವತಂತ್ರವಾಗಿ ಉಂಟಾದ ಹೆಚ್ಚಳವು ಅಂತೆಯೇ ಕಂಡ ಒಟ್ಟೆಯಲ್ಲಿ ಹರಿದು ಹೋಗುವುದು ನ್ಯಾಯವೇ ಅಲ್ಲವೆ? ಹೀಗಿರುವಾಗ ಬಂಡವಲುಗಾರ ರಾಷ್ಟ್ರಗಳಲ್ಲಿನ ಜನ ಆಶಾನೇತ್ರಗಳಿಂದ ಯೋಜನಾತ್ಮಕ ಸಮಾಜಗಳ ಕಡೆಗೆ ನೋಡುವುದರಲ್ಲಿ ಒಂದು ನ್ಯಾಯವುಂಟು. ಯುದ್ಧಾನಂತರದ ಜಗತ್ತು ಆ ಕಡೆಗೆ ಮೇಲಿಂದ ಮೇಲೆ ಹಾತೊರೆದು ಹೆಚ್ಚು ಹೆಚ್ಚು ರಾಷ್ಟ್ರಗಳು ಯೋಜನಾತ್ಮಕ ಸಮಾಜ ರಚನೆಯ ಹವಣಿಕೆಯಲ್ಲಿರುವುದು ಒಳ್ಳೆಯ ಸೂಚನೆಯೆಂದು ನಾವು ನಂಬಬಹುದು.

## ಯೋಜನೆಯ ಚಿರಶತ್ರುಗಳು :

ಇಡಿಯ ದೇಶವನ್ನೇ ಯೋಜನಾತ್ಮಕವಾಗಿ ನಡೆಯಿಸದಿದ್ದರೂ, ಆರ್ಥಿಕ ರಂಗದ ಹಲಕೆಲವು ಕ್ಷೇತ್ರಗಳಲ್ಲಿ ಯೋಜನೆಗೆ ಮುಖ್ಯಸ್ಥಾನವಿರತಕ್ಕದೆಂದು ಬಂಡವಲುಗಾರ ಅರ್ಥಶಾಸ್ತ್ರಿಗಳೇ ಸೂಚಿಸಿದ್ದಾರೆ. ಇಪ್ಪತ್ತನೆಯ ಶತಮಾನದ ಪ್ರಸಿದ್ಧ ಅರ್ಥಶಾಸ್ತ್ರಿಯಾದ ದಿವಂ| ಲಾರ್ಡ್ ಕೀನ್ಸ್ ೧೯೩೬ರಲ್ಲಿ ಬರೆದ "ಜನರಲ್ ಥಿಯರಿ ಒಫ್ ಎಂಪ್ಲೊಯ್ಮೆಂಟ್, ಇಂಟರೆಸ್ಟ್ ಎಂಡ್ ಮನೀ" ಎಂಬ ವಿಶ್ವವಿಖ್ಯಾತ ಪುಸ್ತಕದಲ್ಲಿ ಬಂಡವಲುಗಾರ ಸಮಾಜದ ಬಿರುಕು ಮುಚ್ಚುವ ಯತ್ನವನ್ನು ಬಹಳ ಚಾಣಾಕ್ಷತೆಯಿಂದ ಮಾಡಲಾಗಿದೆ. ಜನರ ಗ್ರಾಹಕಶಕ್ತಿ ಕಡಮೆಯಾಗಿರುವುದರಿಂದಲೇ ಮುಂದಿಗೆ ಜೋರು ಬರುವುದೆಂದು ಕೀನ್ಸ್ ತೋರಿಸಿಕೊಟ್ಟನು. ಇದಕ್ಕಾಗಿ ಮುಂದಿಯ ಕಾಲದಲ್ಲಿ ಮನೆಕಟ್ಟುವುದೇ ಮುಂತಾದ ಸಾರ್ವಜನಿಕೋಪಯೋಗಿ ಕಾರ್ಯಗಳನ್ನು ಕೈಕೊಂಡು ಜನಕ್ಕೆ ಆದಾಯ ಒದಗಿಸಿದರೆ ಬೇಡಿಕೆ ಅಧಿಕವಾಗುವುದೆಂದೂ, ತನ್ಮೂಲಕ ಉತ್ಪಾದನೆಗೆ ಪ್ರೋತ್ಸಾಹ ದೊರೆತು ಅದು ಮೇಲ್ಮುಖವಾಗಿ ಪುಟಿಯುವುದೆಂದೂ, ಕೀನ್ಸ್ ಒಂದು ಪರಿಹಾರ ಮಾರ್ಗವನ್ನು ತೋರಿಸಿದನು. ಬೇಡಿಕೆಯ ಪ್ರಮಾಣವೇನು? ಗ್ರಾಹಕಶಕ್ತಿ ಎಷ್ಟುಕುಂದಿದೆ?

ಅದನ್ನು ಭರ್ತಿಮಾಡಲು ಗೃಹನಿರ್ಮಾಣವೇ ಮುಂತಾದ ಯೋಜನೆ ಎಷ್ಟುಕಾಲ, ಯಾವ ಪ್ರಮಾಣದಲ್ಲಿ, ನಡೆಯಬೇಕು? ಎಂಬುದನ್ನು ಒಂದು ರಾಷ್ಟ್ರೀಯ ಸರಕಾರ ವಿಚಾರಮಾಡಲು ತೊಡಗಿದ ಪಕ್ಷಕ್ಕೆ, ಅದು ಯೋಜನಾತ್ಮಕ ಸಮಾಜದ ದಾರಿಯಲ್ಲಿ ಮೊದಲ ಹೆಜ್ಜೆ ಇಟ್ಟಿದೆ ಎಂದು ನಿರಾತಂಕವಾಗಿ ಹೇಳಬಹುದು.

ಈಗ್ಗೆ ಸುಮಾರು ನೂರಿನ್ನೂರು ವರುಷಗಳಿಂದ ಬಂಡವಲ್ಲುಗಾರ ಸಮಾಜದ ಸತ್ತ್ವಪರೀಕ್ಷೆಯಾಯಿತು. ಎರಡು ಜಾಗತಿಕ ಮಹಾಸಮರಗಳನ್ನೂ, ನಿಯತ ಕಾಲಿಕವಾದ ಅಭಾವದಾರಿದ್ರ್ಯಗಳ ದುರವಸ್ಥೆಯನ್ನೂ, ಸೃಷ್ಟಿಮಾಡಿದ ಈ ಪರಬ್ರಹ್ಮ ಇನ್ನು 'ಪಿಂಚಣಿ'ಪಡೆಯಬೇಕು, ಯೋಜನಾತ್ಮಕ ಸಮಾಜಪದ್ಧತಿ ಪರಿಪೂರ್ಣವಾದ ಅರ್ಥವ್ಯವಸ್ಥೆಗೆ ಕಾರಣವಾಗಲಾರದಾದರೂ, ಅದು ಕೂಡ ಕೊಂಚ ಪರಿಶ್ರಮಿಸಿ ಅನುಭವ ಪಡೆಯಲು ಅವಕಾಶ ದೊರೆಯಬೇಕು. ದ್ವಿತೀಯ ಮಹಾಯುದ್ಧಾನಂತರದ ಜಗತ್ತಿನಲ್ಲಿ ಅಂಥ ಅವಕಾಶ ಖಂಡಿತವಾಗಿ ದೊರೆಯುವುದೆಂಬ ಭರವಸೆಗೆ ಯೋಜನಾತ್ಮಕ ಸಮಾಜರಚನೆಯ ದೀಕ್ಷೆವೆತ್ತ ಸಮಾಜವಾದಿಗಳೂ ಸಾಮ್ಯವಾದಿಗಳೂ ರಾಜಕೀಯ ಪ್ರಾಬಲ್ಯಕ್ಕೆ ಬಂದಿರುವುದು ಆಶಾದಾಯಕವಾಗಿದೆ. ಆದುದರಿಂದ ಬಂಡವಲುಗಾರಿಕೆಯ ಸ್ವಾಯುತ್ತತೆಯನ್ನುಳಿಸಿಕೊಳ್ಳಲು ಹವಣಿಸುವಂಥ ಜನರ ವೈಜ್ಞಾನಿಕ ವಿಮರ್ಶೆಗಳೆಲ್ಲ ಅರಣ್ಯರೋದನವೇ ಸರಿ. ಅವರಲ್ಲೊಬ್ಬ ಚತುರವಿರೋಧಿ ಗೋಳ್ಗರೆಯುವುದನ್ನು ಕೊಂಚ ಅವಲೋಕಿಸಿ, ಯೋಜನಾತ್ಮಕ ಸಮಾಜರಚನೆಯಲ್ಲಿ ಟೀವೀಏಯಂಥ ಪ್ರಾದೇಶಿಕ ವ್ಯವಸ್ಥೆಗಳ ಸ್ಥಾನಮಾನವೇನೆಂಬುದನ್ನು ಪರಿಶೀಲಿಸುವ.

ಹೆರ್. ಫ್ರೆಡರಿಕ್ ಏ. ವೊನ್ ಹಯೆಕ್ ಇಂಗ್ಲೆಂಡಿಗೆ ಬಂದು ನೆಲಸಿದ ಒಬ್ಬ ಆಸ್ಟ್ರಿಯನ್ ಅರ್ಥಶಾಸ್ತ್ರಿ. ಈತನಿಗೆ ಅರ್ಥಶಾಸ್ತ್ರದಲ್ಲಿ ಅಗಾಧವಾದ ಪಾಂಡಿತ್ಯವುಂಟು. ಯೋಜನಾತ್ಮಕ ಸಮಾಜಕ್ಕೆ ಈತ ಬದ್ಧ ವಿರೋಧಿ. ಅದು "ಗುಲಾಮಗಿರಿಯ ಹಾದಿ" ಎಂದು ಅವನು ಘಂಟಾಘೋಷವಾಗಿ ಸಾರಿದ್ದಾನೆ. ಬೆಲೆಯ ಪದ್ಧತಿ ಮೇಲಾಟದ ಸಮಾಜಕ್ಕೆ ಅಡಿಗಲ್ಲು.

ಖಾಸಗಿ ವ್ಯಾಪಾರಿ ತನ್ನ ಬೇಡಿಕೆಯನ್ನು ಬೆಲೆಗೆ ಹೊಂದಿಸಿಕೊಳ್ಳ ಬೇಕೇ ಹೊರತು, ಅವನ್ನು ನಿಯಮಿಸುವ ಅಧಿಕಾರ ಅವನಿಗಿರಬಾರದು. ಔದ್ಯೋಗಿಕ ಯಂತ್ರವು ಜಟಿಲವಾಗುತ್ತ ಬಂದಂತೆ ಕೇಂದ್ರೀಕೃತವಾದ ಒಂದು ಇಲಾಖೆಗೆ ನಾನಾ ತರದ ವಸ್ತುಗಳ ಬೆಲೆಯನ್ನು ನಿಯಮಿಸುವ ಕೆಲಸವು ಗಡುತರವಾಗುವುದು, ಅಂಥಕಾಲದಲ್ಲಿ ಗ್ರಾಹಕರ ಬೇಡಿಕೆ ಮತ್ತು ದುಡ್ಡಿನ ಚೀಲಕ್ಕನುಗುಣವಾಗಿ ಉತ್ಪಾದನೆ ನಡೆಯುವುದಕ್ಕೆ ಖಾಸಗಿ ವ್ಯಾಪಾರಿ ಸಹಾಯವಾಗುತ್ತಾನೆ. ಉತ್ಪಾದನೆಯ ನಿರ್ಣಯವು ಕೇಂದ್ರೀಕೃತವಾದ ಪಕ್ಷಕ್ಕೆ, ತಯಾರಿಸಿದ ವಸ್ತುಗಳಲ್ಲಿ ವೈವಿಧ್ಯ ಕಡಮೆ ಯಾಗುವುದು. ಇಂಥ ವೈವಿಧ್ಯಕ್ಕೂ, ಆಯ್ಕೆಯಲ್ಲಿ ಸ್ವಾತಂತ್ರ್ಯಕ್ಕೂ, ನಾವು ತೆರುವ ದಂಡ ಬಹಳ ಹೆಚ್ಚೆಂದು ಸ್ವಲ್ಪಕಾಲದವರೆಗೆ ತೋರಿ ದರೂ, ಇದರಿಂದ ಬರುವ ದೀರ್ಘಾವಧಿಯ ಲಾಭ ಅಗಣಿತವಾದುದು- ........ಯೋಜನಾತ್ಮಕ ಸಮಾಜದಲ್ಲಿ ನಾವೆಲ್ಲರೂ ಒಪ್ಪಿಗೆಕೊಟ್ಟ ಕೆಲಸ ಗಳಿಗಲ್ಲ, ಸಾಮೂಹಿಕ ಚಟುವಟಿಕೆ ನಡೆಯುವುದು; ಯಾವ ಚಟುವ ಟಿಕೆ ನಡೆಯಬೇಕಾದರೂ, ಎಲ್ಲ ವಿಷಯಗಳಲ್ಲಿ ನಾವು ಒಪ್ಪಿಗೆಗೆ ಬರಲೇ ಬೇಕೆಂಬ ಒತ್ತಾಯವುಂಟು ... ...ರಾಷ್ಟ್ರವು ಯೋಜನೆಗಳನ್ನು ಹೆಚ್ಚಿ ಸುತ್ತ ಬಂದ ಹಾಗೆ ವ್ಯಕ್ತಿಗೆ ತನ್ನ ಜೀವನದ ಯೋಜನೆಯೇ ದುಸ್ತರವಾಗುವುದು....''

ಯೋಜನಾರಹಿತವಾದ ಮೇಲಾಟದ ಸಮಾಜದ ಛಿದ್ರವನ್ನು ಈ ಮೊದಲೆ ವಿವರಿಸಿರುವುದರಿಂದ ಹಯೆಕ್ ಮಹಾಶಯನ ವಾದಕ್ಕೆ ಈಗಾ ಗಲೇ ವಿರೋಧ ಸೂಚಿಸಿರುತ್ತೇವೆ. ದೀರ್ಘಾವಧಿಯಲ್ಲಿ ಇದರಿಂದ ನಮಗೆ ಅಪರಿಮಿತ ಲಾಭವುಂಟೆಂದು ಆತ ಹೇಳುವಾಗ ಲಾರ್ಡ್‌ಕೀನ್ಸ್ ಹೇಳಿದ "ದೀರ್ಘಾವಧಿಯಲ್ಲಿ ನಾವೆಲ್ಲ ಸತ್ತಾಗುವುದು" (In the long run we are all dead) ಎಂಬ ನಗುಮಾತು ಜ್ಞಾಪಕಕ್ಕೆ ಬರು ವುದು. ವ್ಯಕ್ತಿಗೆ ಜೀವನವು ದುಸ್ತರವಾಗುತ್ತ ಬಂದಿರುವುದು ಯೋಜ ನೆಯ ದೆಸೆಯಿಂದಲ್ಲ, ಯೋಜನಾರಾಹಿತ್ಯದಿಂದ ಎಂಬುದನ್ನು ಹಿಂದಿನ ಪ್ರಕರಣದಲ್ಲಿ ವಿವರಿಸಿದ್ದಾಗಿದೆ.

## ಯೋಜನಾತ್ಮಕ ಟೀವೀಏ:

ಸಂಯುಕ್ತರಾಷ್ಟ್ರವು ಅತಿಹೀನವಾದ ಆರ್ಥಿಕ ದುರ್ದೆಶೆಗೆ ಸಿಲುಕಿದ್ದಾಗ ಟೀವೀಏ ಜನ್ಮತಾಳಿತು. ನಿರುದ್ಯೋಗವು 'ಸರ್ವೇಸರ್ವಾ' ಆಗಿದ್ದ ಕಾಲಕ್ಕೆ ರಾಷ್ಟ್ರದ ಒಂದು ಪ್ರದೇಶದಲ್ಲಿ ಸರ್ವಜನೋಪಯೋಗಿಯಾದ ಟೆನಸಿ ಯೋಜನೆಯನ್ನು ಕೈಗೊಂಡರೆ ಸಮಸ್ಯೆ ಬಹುಮಟ್ಟಿಗೆ ಬಗೆಹರಿಯುವುದೆಂದು ದೂರದರ್ಶಿಯಾದ ರೂಸ್‌ವೆಲ್ಟ್ ಮಹಾಶಯನು ಎಣಿಸಿ, ಟೀವೀಏಯನ್ನು ಕಾಂಗ್ರೆಸಿಗೆ ಸೂಚಿಸಿದ. ಟೆನಸಿ ಪ್ರದೇಶದ ಆರ್ಥಿಕೋನ್ನತಿ ಆತ ಸೂಚಿಸಿದ ಕಾರ್ಯಕ್ರಮದ ಯಶಸ್ಸನ್ನು ತೋರಿಸುತ್ತಿದೆ- ನೂರಾರು ವರ್ಷಗಳಿಂದ ಖಾಸಗೀ ಉದ್ದಿಮೆಗಳಿಗೆ ಸಹಕಾರವಿತ್ತು ಹೊಣೆಗಾರಿಕೆಯನ್ನು ಮುಗಿಸಿಕೊಳ್ಳುತ್ತಿದ್ದ ಅಮೇರಿಕದ ಫೆಡರಲ್ ಸರಕಾರ ಟೀವೀಏ ಸೃಷ್ಟಿಯಲ್ಲಿ ಒಂದು ಹೊಸ ಹಾದಿಯನ್ನು ತುಳಿಯಬೇಕಾಯಿತು. ಅದು ಯೋಜನಾತ್ಮಕವಾಗಿದ್ದುದನ್ನು ಗಮನಿಸಿದರೆ, ಕಾಲವು ಅದೆಷ್ಟು ಪಲ್ಲಟಿಸಿರಬೇಕೆಂಬುದು ವ್ಯಕ್ತವಾಗುವುದು. ಆದರೆ ಯೋಜನೆಯ ಎಲ್ಲ ವಿವರಗಳನ್ನೂ ಕೇಂದ್ರೀಕರಿಸದೆ, ಆಡಳಿತೆಯನ್ನು ವಿವಿಧ ವಿಭಾಗಗಳಿಗೆ ಹಂಚಿಹಾಕಿರುವುದು, ಯೋಜನಾಬದ್ಧ ಸಮಾಜಕ್ಕೆ ಅಮೇರಿಕವು ತನ್ನದೇ ಆದ ಬಣ್ಣವನ್ನು ಕೊಟ್ಟು, ಪ್ರಜಾತಂತ್ರದ ಮಿರುಗಿಂದದಕ್ಕೆ ಕಳೆಗೊಟ್ಟಿರುವುದನ್ನು ಎತ್ತಿ ತೋರಿಸುವುದು.

ಸಂಯುಕ್ತ ರಾಷ್ಟ್ರಕ್ಕೆ ಯೋಜನೆ ಬರುವುದು ಹೊಸದಾಗಿ ಏನೂ ಅಲ್ಲ. ೧೭೮೭ರ ಸರಕಾರಿ ಒರ್ಡಿನೆನ್ಸು ಭೂಮಿಯ ವಿಷಯದಲ್ಲಿ ಹೊಸದೊಂದು ಯೋಜನೆಯನ್ನೆ ಸೃಜಿಸಿತು. ಪಡುವಲಿನ ವಿಶಾಲವಾದ ಭೂಪ್ರದೇಶವನ್ನು ಜನನಿಬಿಡವಾಗುವಂತೆ ಮಾಡಲು ಇಲ್ಲಿಂದಲೇ ಆರಂಭವಾಯಿತು. ೧೮೬೨ರ ಹೋಮ್‌ಸ್ಟೆಡ್ ಕಾಯಿದೆ, ಶರ್ಮಾನ್ ಟ್ರಸ್ಟ್ ವಿರೋಧಿ ಶಾಸನ, ಗ್ರಾಂಜರ್ ಕಾನೂನು, ಮುಂತಾದುವೆಲ್ಲ ರಾಷ್ಟ್ರೀಯ ಮತ್ತು ಪ್ರಾಂತೀಯ ಸರಕಾರಗಳು ಯೋಜನೆಯ ದಾರಿಯಲ್ಲಿ ಸಾಗುತ್ತಿರುವುದನ್ನು ಸೂಚಿಸುತ್ತವೆ. ಆದರೆ ಈ ಯೋಜನೆಗಳು ಸಂಪೂರ್ಣವಾಗಿ ಒಳ್ಳಿತಿಗೇ ದಾರಿ ಮಾಡಲಿಲ್ಲ. ಅಂದಿನ ಯೋಜನೆಗಳ

ಸೃಷ್ಟಿಕರ್ತರ ಸವಿಸ್ತಾರದೃಷ್ಟಿಯ ಕಾರ್ಯಕ್ರಮಗಳಿಂದ ಇಂದಿನ ಅಮೇರಿಕಾನರು ತುಸು ಕಷ್ಟ ಅನುಭವಿಸಬೇಕಾಗಿದೆ. ಏಕೆಂದರೆ, ಉದ್ದಿಮೆದಾರರ ಯೋಜನೆಗೆ ಸ್ವಂತ ಲಾಭವೇ ಗುರಿಯಾದುದರಿಂದ ಸಾರ್ವಜನಿಕರಿಗೆ ತೊಂದರೆಯುಂಟಾಗುವುದು ಸಹಜ. ಸ್ವಾರ್ಥಲಾಭವೂ ಪರೋಪಕಾರವೂ, ಒಂದೇ ಕಾಲಕ್ಕೆ ಸಮನಿಸುವುದನ್ನು ಟೀವೀಏಯ ಸಾಧನಸಂಪತ್ತಿನ ಏಕೀಕೃತ ಬೆಳವಣಿಗೆ, ಪ್ರಜಾತಂತ್ರದ ರೀತ್ಯಾ ಪ್ರಕಟಿಸುತ್ತದೆ. ಪ್ರದೇಶದ ಸಾಮಾನ್ಯ ವ್ಯಕ್ತಿ ಟೀವೀಏ ಯೋಜಕನ ದೃಷ್ಟಿಪಥದಿಂದ ಎಂದೂ ತಪ್ಪುವುದಿಲ್ಲ. ಪ್ರದೇಶದಲ್ಲಿ ಅಲ್ಲಲ್ಲಿ ಬದುಕಿಬಾಳುತ್ತಿರುವ ಸಾಮಾನ್ಯ ಜನ ಒಟ್ಟು ಯೋಜನೆಯಲ್ಲಿ ಭಾಗವಹಿಸದೆ ಇದ್ದರೆ ಅವರಿಗೆ ಅದರಲ್ಲಿ ಒಂದು ಅಭಿಮಾನ, ಒಂದು ಆತ್ಮೀಯತೆ, ಬೆಳೆಯುವುದು ಕಷ್ಟವಾಗಿ, ಯೋಜನೆ ಅವರಿಗೆ ಹೊರಗಿನದಾಗುತ್ತದೆ. ಪ್ರದೇಶದ ಬೆಳವಣಿಗೆಯ ಪ್ರತ್ಯಕ್ಷ ಹೊಣೆ ಎಂದರೆ ಸಾಮಾನ್ಯ ವ್ಯಕ್ತಿಗೆ ಒಂದು ಮಹಾ ಶಿಕ್ಷಣವೇ ಸರಿ. ಇಂಥ ಶಿಕ್ಷಣದಿಂದ ಪ್ರಜಾತಂತ್ರದ ಹಾದಿ ನಯವಾಗುವುದು. ಯೋಜನೆಗೊಂದು ನೈತಿಕ ಮತ್ತು ಧಾರ್ಮಿಕ ಅರ್ಥ ಬಂದೊದಗುವುದು. ಸಾರ್ವಜನಿಕರಲ್ಲಿ ಸಾಮಾನ್ಯ ಉದ್ದೇಶದ ಸಲುವಾಗಿ ದುಡಿಯುವ ಕರ್ತವ್ಯಬುದ್ಧಿ ಜಾಗೃತವಾದರೆ ಪ್ರಜಾತಂತ್ರದ ಸಿದ್ಧಾಂತವು ಪರಿಪೂರ್ಣವಾದಂತಾಯಿತು.

ಟೀವೀಏಯಲ್ಲಿ ಅನೇಕಾನೇಕ ಯೋಜನೆಗಳ ರಚನೆಗೆ ಅವಕಾಶವುಂಟು ನಿಜ; ಆದರೆ ಯೋಜನೆಯ ಗುರಿಯನ್ನೂ, ಗುರಿತಲಪುವ ಹೊಣೆಯನ್ನೂ ಒಂದೇ ಸಂಸ್ಥೆಗೆ ಕಟ್ಟಿಕೊಟ್ಟಿರುವುದು ಯೋಜನೆಗಳ ಇತಿಹಾಸದಲ್ಲೇ ಅತಿ ವಿರಳ. ಹೀಗೆ ಯೋಜನಾಪದ್ಧತಿಗೂ, ಪ್ರಜಾತಂತ್ರದ ತತ್ತ್ವಕ್ಕೂ ಹೊಂದಿಕೆಯಾಗಿರುವುದರಿಂದ ಅತ್ತ ಯೋಜನಾಪದ್ಧತಿಗೂ ಗೆಲ, ಇತ್ತ ಪ್ರಜಾತಂತ್ರಕ್ಕೂ ಸೋಲಿಲ್ಲ. ಸುಪ್ರಸಿದ್ಧ ಜರ್ಮನ್ ಲೇಖಕ ಥಾಮಸ್ ಮ್ಯಾನ್‌ನ ಮಾತಿನಲ್ಲಿ "ಪ್ರಜಾತಂತ್ರವೆಂದರೆ ಚಿಂತನೆ. ಆದರದು ಜೀವನಕ್ಕೂ, ಕ್ರಿಯಾಶೀಲತೆಗೂ ಅನ್ವಯಿಸಿಕೊಂಡ ಚಿಂತನೆ. ಪ್ರಜಾತಂತ್ರ ಯುಗಕ್ಕೆ ಪೂರ್ವದ ಬುದ್ಧಿಜೀವಿಗಳಲ್ಲಿ ಯಾರೂ ಕ್ರಿಯಾಶೀಲತೆಯ ವಿಚಾರವಾಗಿ ಆಗಲಿ, ಅಥವಾ ತನ್ನ

ಚಿಂತನೆಯನ್ನು ಕ್ರಿಯಾರೂಪಕ್ಕೆ ತಂದರೆ ಏನು ಪರಿಣಾಮವಾದೀತೆಂಬ ಕುರಿತಾಗಲಿ, ಯೋಚಿಸಲಿಲ್ಲ. ಪ್ರಜಾತಂತ್ರವನ್ನರಿಯದ ಮತ್ತು ಅದ ರಲ್ಲಿ ಅಲ್ಪ ಶಿಕ್ಷಿತವಾದ ರಾಷ್ಟ್ರಗಳಲ್ಲಿ ಚಿಂತನೆ ತೀರ ಆದರ್ಶದ ಬಿಸಿಲ್ಗುದುರೆಯ ಬೆನ್ನು ಹಿಡಿದಿರುವುದನ್ನೂ, ಚಿಂತನೆಯ ಯಥಾರ್ಥ ಪರಿಣಾಮದ ಲಕ್ಷ್ಯ ಇಲ್ಲದೆ ಇರುವುದನ್ನೂ ನಾವು ಕಾಣಬಹುದು."

ಪ್ರಜಾತಂತ್ರದ ಮೂಲಕವೇ ಸ್ವಾತಂತ್ರ್ಯದ ಸಾಧನೆಯೆಂಬುದಕ್ಕೆ ಜಾನ್ ಡ್ಯೂಯಿ ಎಂದ ಚಿನ್ನದ ಮಾತುಗಳನ್ನಷ್ಟು ಕೇಳೋಣ. "ಆಧುನಿಕ ಜಗತ್ತಿನ ಸಂಘರ್ಷವೆಲ್ಲ ನಮ್ಮ ಸಂಸ್ಥೆಗಳಲ್ಲಿಯೂ, ನಮ್ಮ ನಮ್ಮ ಮನೋಭಾವಗಳಲ್ಲಿಯೂ ಅಡಕವಾಗಿದೆ. ಇದರಲ್ಲಿ ನಮಗೆ ಗೆಲುವು ದೊರೆಯಬೇಕಾದರೆ, ವಿಚಾರ ಪರಾಮರ್ಶೆ, ಪರಸ್ಪರ ವಿಚಾರ ವಿನಿಮಯ, ಮಾತಿನ ನಯವಿನಯ, ಮುಂತಾದ ಪ್ರಜಾತಂತ್ರಾತ್ಮಕ ವಿಧಾನಗಳನ್ನು ನಮ್ಮ ರಾಜಕೀಯದಲ್ಲಿಯೂ, ಉದ್ಯಮಗಳಲ್ಲಿಯೂ, ಶಿಕ್ಷಣದಲ್ಲಿಯೂ, ಸಾಮಾನ್ಯವಾಗಿ ನಮ್ಮ ಸಂಸ್ಕಾರದಲ್ಲಿಯೂ, ಬಳಸಿಕೊಳ್ಳಬೇಕು. ನಮ್ಮ ಲಕ್ಷ್ಯ ಪ್ರಜಾತಂತ್ರಾತ್ಮಕವಾಗಿರುವುದು ಹೌದಾದರೆ ಅದನ್ನು ಸಾಧಿಸುವ ಮಾರ್ಗವೂ ಪ್ರಜಾತಂತ್ರಾತ್ಮಕವಾಗಿರಲೇ ಬೇಕು. ನಮ್ಮ ಚರಮಲಕ್ಷ್ಯಕ್ಕೂ, ಆದರ ಸಾಧನಾಮಾರ್ಗಕ್ಕೂ ಹೊಂದಿಕೆ ಇರುವಂಥ ವಿಧಾನಗಳು ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ನಿಧಾನವಾಗಿ ಪಸರಿಸಿದರೇನೆ ಪ್ರಜಾತಂತ್ರವು ಉಳಿದೀತು. ಸಹಕಾರಾತ್ಮಕವಾಗಿಯೂ, ಸ್ವಬುದ್ಧಿಪ್ರೇರಿತವಾಗಿಯೂ ಬರುವಂಥ ಸ್ವಾತಂತ್ರ್ಯದ ಹಿರಿಮೆಯನ್ನೂ, ತನ್ಮೂಲಕ ಸಾಧಿತವಾಗುವ ವ್ಯಕ್ತಿವಿಕಾಸದ ಗರಿಮೆಯನ್ನೂ, ಅಮೆರಿಕನ್ ಪ್ರಜಾತಂತ್ರ ಉದ್ಘೋಷಿಸಬೇಕು."

---

## ಅಧ್ಯಾಯ ಹನ್ನೊಂದು.

## ಹದಿನೈದು ವರ್ಷಗಳ ಅನಂತರ : ಡಿಕಟೂರಿನ ಕತೆ.

ಟೆನಸಿ ಪ್ರದೇಶದ ಅಲಬಾಮಾ ಪ್ರಾಂತ್ಯಕ್ಕೆ ಸೇರಿದ ಡಿಕಟೂರಿನ ದೈನಿಕ ಪತ್ರಿಕೆಯೊಂದರ ಸಂಪಾದಕನಾದ ಬಾರ್ರೆಟ್ ಶೆಲ್ಟನ್ ಇದೇ ಕಳೆದ ಸಪ್ಟೆಂಬರ ಮಾಹೆಯಲ್ಲಿ ಸಂಯುಕ್ತ ರಾಷ್ಟ್ರಸಂಘದ ವೈಜ್ಞಾನಿಕ ಸಮ್ಮೇಳನವೊಂದರ ಸಮ್ಮುಖದಲ್ಲಿ ಮಾಡಿದ ಸ್ವಾರಸ್ಯವಾದ ಭಾಷಣದ ಸಾರವನ್ನು ಕೆಳಗೆ ಕೊಡಲಾಗಿದೆ:

ಸಂಯುಕ್ತರಾಷ್ಟ್ರಸಂಘದ ಈ ಸಮ್ಮೇಳನಕ್ಕೆ ಆಗಮಿಸಿರುವ ಮಹಿಳೆಯರೇ ಮತ್ತು ಮಹನೀಯರೇ!

ಟೇವೀಏ ಹಾಗೂ ನನ್ನ ಪಟ್ಟಣದ ನಿವಾಸಿಗಳ ಹದಿನೈದು ವರುಷ ಅವಧಿಯ ಸಹಕಾರದ ಪರಿಣಾಮವಾಗಿ ಏನೊಂದೂ ಉಪಯೋಗವಿಲ್ಲದ ದುರವಸ್ಥೆಯನ್ನು ದಾಟಿ, "ಏನೋ ಒಂದೆಂ"ಬ ಸ್ಥಿತಿಗೆ ಮುಟ್ಟಿರುವ ನನ್ನೂರ ಡಿಕಟೂರಿನ ಕತೆಯನ್ನು, ತಮಗೆ ಅರಿಕೆಮಾಡುವ ಸಂದರ್ಭವು ನನಗೆ ದೊರೆತಿರುವುದು ನನ್ನ ಪರಮ ಸೌಭಾಗ್ಯವೆಂದು ನಾನು ಎಣಿಸುತ್ತೇನೆ.

ನಾವು ಮಾಡಿದಂತೆ ನೀವು ಮಾಡಲು ಶಕ್ಯವಿದೆ. ಒಂದು ಬಗೆಯ ಧೈರ್ಯ, ಸಾಹಸ, ಜಾಣ್ಮೆ, ಮೂರು ಉಳ್ಳವರಾರಿಗೂ ಈ ಕೆಲಸ ಸಾಧ್ಯವಿದೆ. ಟೇವೀಏ ಮಾಟಗಾರನ ಮಂತ್ರದ ಕೋಲಲ್ಲ; ಸ್ವತಂತ್ರ ವ್ಯಕ್ತಿಗಳ ಬುದ್ಧಿಯ ಬಲವಿಲ್ಲದೆ ಸಾಮಾಜಿಕ ಪ್ರಗತಿಯನ್ನು ತರುವುದು ಟೇವೀಏಗೂ ಅಸಾಧ್ಯವಾದ ಮಾತು.

ಮೊದಲು ಮೊದಲು ಟೇವೀಏಯನ್ನು ವಿರೋಧಿಸಿದವರಲ್ಲಿ ನಾನೂ ಒಬ್ಬನಾಗಿದ್ದೆನೆಂದು ಖಂಡಿತವಾಗಿ ಒಪ್ಪಿಕೊಳ್ಳುತ್ತೇನೆ. ಟೇವೀಏ ಎಂದರೇನು? ಏತಕ್ಕಾಗಿ? ಎಂಬುದರ ಅರಿವಿಲ್ಲದ ಮೇಲೆ ವಿರೋಧ ತನ್ನಷ್ಟಕ್ಕೆ ಉಂಟಾಗುವುದು. ಸರಕಾರವು ನನ್ನ ಜೀವನವನ್ನು ನಿಯಂತ್ರಿಸಲು ಬಯಸುತ್ತದೆಯೆ? ನನ್ನೂರಿನ ಜನರನ್ನು ತನ್ನ ಅಂಕೆಯೊಳಗಿರಿ

ಸಲೆಳಸುತ್ತಿದೆಯೆ? ಹಾಗಾದರೆ ನಾನು ಟೀವೀಏಯನ್ನು ವಿರೋಧಿಸಲೇ ಬೇಕು.

ಡಿಕಟೂರಿನ ಜನ ಊರಿಗೊಳ್ಳೆಯದಾಗಬೇಕೆಂದು ಶತಯತ್ನ ಮಾಡುತ್ತಿರುವುದನ್ನು ನಾನು ಬುದ್ಧಿ ತಿಳಿದಂದಿನಿಂದ ನೋಡುತ್ತಾ ಇದ್ದೇನೆ. ಆದರೆ ಬಹು ಕಾಲ ಲಾಭ ಬರುವ ಯಾವ ಏರ್ಪಾಡೂ ಸಾಧ್ಯವಾಗಲಿಲ್ಲ. ಜನರಿಗೆ ಏನು ಮಾಡಬೇಕೆಂಬುದೇ ತೋರುತ್ತಿರಲಿಲ್ಲ.

ತನ್ಮಧ್ಯೆ ೧೯೩೨ನೆಯ ಇಸವಿ ಬಂದಿತು. ಇಡಿಯ ಸಂಯುಕ್ತ ರಾಷ್ಟ್ರಕ್ಕೇ ಮಂದಿಯ ಮಾರಿ ಬಡಿಯಿತು. ಟೆನಸಿ ಕಂದರವಲ್ಲಿ, ವಿಶೇಷತಃ ನಮ್ಮೂರಿನಲ್ಲಿ ಅದರ ಉಪಟಳ ಹೇಳಿ ತೀರದು. ಎರಡು ಸಾವಿರ ಜನಕ್ಕೆ ಉದ್ಯೋಗ ಒದಗಿಸುತ್ತಿದ್ದ ನಮ್ಮೂರಿನ ಏಕ ಮಾತ್ರ ರೈಲು ಸಾಮುಗ್ರಿಯ ಉದ್ಯಮವು ನಿಂತು ಹೋಯಿತು. ದೂರದ ನ್ಯೂ ಇಂಗ್ಲೆಂಡ್ ಪ್ರಾಂತ್ಯದಿಂದ ತಂದು, ಶಕ್ತಿ ಮೀರಿ ಸಹಾಯ ಧನ ಒದಗಿಸಿ, ನಾವು ನಡೆಯಿಸಿಕೊಂಡು ಬರುತ್ತಿದ್ದ ಇನ್ನೊಂದು ಉದ್ಯಮ ದಿವಾಳಿ ತೆಗೆಯಿತು. ಬಟ್ಟೆಬರೆ ತಯಾರಿಸುವ ಮೂರನೆಯ ಮುಖ್ಯ ಉದ್ಯಮ ಕಾಲಗತಿಗೆ ಶರಣು ಹೋಯಿತು. ಇದ್ದ ಎಂಟು ಬ್ಯಾಂಕುಗಳಲ್ಲಿ ಏಳು ಮುಳುಗಿತು.

ಕೃಷಿಯ ಗತಿಯೋ! ನಮ್ಮಲ್ಲಿರುವುದೇ ಒಂದು ಬೆಳೆ–ಹತ್ತಿ. ಅದಕ್ಕೆ ರಾತಲಿಗೆ ಐದು ಸೆಂಟುಗಳಾದರೆ ಬೇಸಾಯಗಾರರು ಬದುಕುವುದಾದರೂ ಹೇಗೆ? ತೆರಿಗೆಯ ಹಣಕ್ಕೆ ಹೊಲಗಳನ್ನು ಮಾರಬೇಕು, ಇರಲಿಕ್ಕೆ ಚೆನ್ನಾದ ಮನೆಇಲ್ಲ, ಉಡಲು ವಸ್ತ್ರವಿಲ್ಲ, ಎಲ್ಲವನ್ನೂ ಸಹಿಸಿಕೊಂಡಿರೋಣ ಎಂದರೆ ಭರವಸೆ ಮೊದಲೇ ಇಲ್ಲ–ಎನ್ನುವಷ್ಟು ಮಟ್ಟಿನ ದಾರಿದ್ರ್ಯ ನಮ್ಮನ್ನಾವರಿಸಿತು.

ಜನರಿಗೆ ಉದ್ಯೋಗ ದೊರೆಯಲಿ, ಸಂದರ್ಭ ಬರಲಿ-ಎಂಬುದೇ ನಮ್ಮ ಆಗಿನ ದಿನ ನಿತ್ಯದ ಪ್ರಾರ್ಥನೆ.

x x x

ಇಂಥ ಅಂಧಕಾರಮಯವೂ, ಕಷ್ಟನಿಷ್ಠುರವೂ, ಆದ ಟೆನಸಿ ಭೂರಂಗಕ್ಕೆ ಚಳಿಗಾಲದ ಒಂದು ಸಂಧ್ಯಾಕಾಲ ಆಗ ಟೀವೀಏಯ ನಿರ್ದೇಶಕ ಮಂಡಳಿಯ ಸದಸ್ಯರಾಗಿದ್ದ ಡೇವಿಡ್ ಇ. ಲಿಲಿಯೆಂಥಾಲರು ಆಗಮಿಸಿದರು. ಡಿಕಟೂರಿನ ನಾವು ನಾಲ್ಕರು ನಾಗರಿಕರು ಅವರನ್ನು ಭೆಟ್ಟಿಯಾಗಿ ನಮ್ಮಿಂದ ಸಾಧ್ಯವಾದಷ್ಟು ವಿರೋಧ ಪ್ರದರ್ಶನ ಮಾಡಿದೆವು. ಅವರು ನಮ್ಮೆಣಿಕೆಗೆ ತೀರ ಭಿನ್ನವಾಗಿಯೂ, ನಮ್ಮ ಹಾದಿಗೆ ತೀರ ಅಡ್ಡವಾಗಿಯೂ ಇರುವಂಥ ಒಂದು ವಿಚಾರ ಪಕ್ಷಕ್ಕೆ ಸೇರಿದವರಾದ್ದರಿಂದ ಅವರು ಹೇಳಿದ ಮಾತಿಗೆ ನಾವು ಸಮ್ಮತಿಸುವಂತಿರಲಿಲ್ಲ. "ಸರಿ, ಚೆನ್ನಾಯಿತು. ನಮ್ಮಲ್ಲಿಗೆ ಬಂದಿರಿ. ನಾವು ಕರೆಯದೇನೆ ಬಂದಿರಿ, ಸರಿ ಹೋಯಿತು. ಇನ್ನು ನಾವು ನಿಮ್ಮ ಧುರೀಣತ್ವವನ್ನು ಒಪ್ಪಿಕೊಂಡರಾಯಿತಷ್ಟೆ, ಇದಕ್ಕೂ ಹೆಚ್ಚಿನದೇನು ಮಾಡುತ್ತೀರಿ, ಹೇಳಿ!" ಎಂಬ ಅಸಡ್ಡೆಯ ಮಾತು ನಾವು ಅಂದು ಅವರೊಡನೆ ಮಾಡಿದ ಸಂವಾದದ ಸಾರಾಂಶವೆನ್ನಬಹುದು.

ಕುರ್ಚಿಯ ಹಿಂಗಾಲನ್ನು ಗೋಡೆಗಾನಿಸಿಕೊಂಡು ಡೇವರು ಮುಗುಳ್ನಕ್ಕರು. ಕಣ್ಣು ಮಿಂಚಿತು. ನಮ್ಮ ಕಡೆಗೆ ತಿರುಗಿ "ಮಾಡುವವನು ನಾನಲ್ಲ, ನೀವು!" ಎಂದು ಹೇಳಿದರು. ಅನಂತರ ನಾವೀತನಕ ಕನಸಿನಲ್ಲೂ ಕೇಳದ ಎಷ್ಟೋ ವಿಷಯಗಳನ್ನು, ಅವರು ನಮಗೆ ತಿಳಿಯಪಡಿಸಿದರು. ನೆರೆ ನಿಯಂತ್ರಣವಂತೆ, ಮಲೇರಿಯಾ ತಡೆಗಟ್ಟುವುದಂತೆ, ಕಡಮೆ ದರದಲ್ಲಿ ವಿದ್ಯುಚ್ಛಕ್ತಿಯ ಪೂರೈಕೆಯಂತೆ, ಸಾರಪಾಲನೆಯಂತೆ, ಜಲ ಸಂಚಾರವಂತೆ,–ಹೀಗೇ ಏನೇನೋ ಹಿರಿ ಹಿರಿ ಆಸೆಗಳನ್ನು ನಮ್ಮ ಮನಸ್ಸಿನಲ್ಲಿ ಮೂಡಿಸಿದರು. "ಸಂದರ್ಭ ಒದಗಿಸುವುದಷ್ಟೇ ನಮ್ಮ ಕೆಲಸ, ಅದನ್ನು ಉಚಿತವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕಾದುದು ನೀವೇ.'' ಎಂದರು. ಇನ್ನು ಮುಂದೆ ನದಿ ನಮ್ಮನ್ನು ಸೋಲಿಸಲಾರದಂತೆ; ನಾವೇ ಅದನ್ನು ಸೋಲಿಸುವುದಂತೆ.

ಹೌದು, ಮಾಡಬೇಕಾದ ಕೆಲಸಗಳನ್ನು ಡೇವರು ನೇರವಾಗಿ ನಮಗೇ ಒಪ್ಪಿಸಿ ಬಿಟ್ಟರು. ನಮಗೆಯೆ! ಎಲ್ಲವೂ ಸ್ಥಾನಿಕ ನಿಯಂತ್ರಣ

ಕ್ಕೊಳಗಾಯಿತು. ಸರಳವಾದ ಅರ್ಥ ಶಾಸ್ತ್ರದ ಉಪಯೋಗದಿಂದಲೂ, ನಮ್ಮ ಜನರ ಉತ್ಸಾಹ, ಸ್ಥೈರ್ಯ, ದುಡಿಮೆಗಳಿಂದಲೂ ಜನ್ಮಾರಭ್ಯದ ನಮ್ಮಾಸೆ ಪೂರೈಸುವಂತಾಯಿತು.

ಸ್ವಲ್ಪ ಕಾಲದ ಮೇಲೆ ಟೀವೀಏಯ ಇನ್ನೊಬ್ಬರು ಸದಸ್ಯರಾದ ಡಾಕ್ಟರ ಹಾರ್ಕೋರ್ಟ ಮೊರ್ಗನ್ ಅವರು ಬಂದರು. ಸುಣ್ಣ, ಫೊಸ್-ಫೇಟ್-ಇವೇ ಅವರ ಮುಖ್ಯ ವಿಷಯ. ದೊಡ್ಡ ದೊಡ್ಡ ಕೈಗಾರಿಕೆಯ ಕುರಿತು ಒಂದು ಒಡಾಯಿ ಮಾತಿಲ್ಲ. ಅದರ ಬದಲಾಗಿ ನಮ್ಮ ಹತ್ತಿರ ಇದ್ದಷ್ಟನ್ನೇ ಹೇಗೆ ಸದುಪಯೋಗಕ್ಕೆ ತರೋಣ, ನಮ್ಮೊಡನಿರುವ ಅಲ್ಪ ಸ್ವಲ್ಪ ಬಂಡವಲನ್ನು ಯಾವ ಬಗೆಯಾಗಿ ಲಾಭಕ್ಕೆ ಹಚ್ಚೋಣ. ಎಂದು ಮುಂತಾಗಿ ನಮಗವರು ಆತ್ಮಿಕ ಉಪದೇಶವನ್ನು ಮಾಡಿದರು.

ಒಟ್ಟಾರೆ ಮೇಲೆ ಲಿಲಿಯೆಂಥಾಲರಾಗಲಿ, ಮೊರ್ಗನ್ ಆಗಲಿ ನಮ್ಮಲ್ಲಿಲ್ಲದ ಯಾವ ಒಂದು ಸಂಗತಿಯನ್ನೂ ನಮಗೆ ತೋರಿಸಲಿಲ್ಲ. ಸಾಧನ ಸಂಪತ್ತೆಲ್ಲ ಬರಬೇಕಾದುದು ನಮ್ಮ ಟೆನಸಿ ನದಿಯಿಂದಲೇ, ಟೆನಸಿ ಮಣ್ಣಿನಿಂದಲೇ. ಆರೋಗ್ಯ ನಿರ್ಮಾಣಕ್ಕೂ ನಾವೇ ಹೊಣೆ, ಗೃಹನಿರ್ಮಾಣವೂ ನಮ್ಮದೇ.

ತಮುಸಾವೃತವಾದ ಆ ಸಂಧಿಕಾಲದಲ್ಲಿ ಈ ಇರ್ವರು ಮಹಾನು ಭಾವರು ನಮಗೆ ಕೊಟ್ಟ ಸಂದೇಶದ ಸಾರ ಒಂದೇ: "ಉದ್ಧರೇದಾತ್ಮ ನಾತ್ಮನಂ"!

X X X

ಆ ದಿನದಿಂದ ನಾವು ನಮ್ಮ ಹಳೆಗಾಲದ ಗೊಡ್ಡು ಅರ್ಥಶಾಸ್ತ್ರಕ್ಕೆ ತಿಲಾಂಜಲಿ ಇತ್ತು ಹೊಸ ಆರ್ಥಿಕ ಯೋಜನೆಯಲ್ಲಿ ಕಾಲಿಟ್ಟೆವು: ಪಟ್ಟಣಿಗರಿಗೆ ಉದ್ಯೋಗ ದೊರೆಯಬೇಕು; ರೈತರಿಗೆ ಒಂದೇ ಒಂದು ಉತ್ಪತ್ತಿಯಿಂದ ವರ್ಷಕ್ಕೊಮ್ಮೆ ಮಾತ್ರ ಸಿಗುವ ಉತ್ಪನ್ನದ ಮೊತ್ತದ ಬದಲು ತಿಂಗಳು ತಿಂಗಳು ರೊಕ್ಕ ಹುಟ್ಟಬರುವಂತಾಗಬೇಕು. ಒಂದನೆಯದಾಗಿ ಇವರೆಂದಂತೆ ಉದ್ಯಮಗಳನ್ನು ನಮ್ಮೂರ ಹೊರಗಿಂದ ಆಮಂತ್ರಿಸಿ ಕೊಳ್ಳುವುದರ ಬದಲು, ನಮ್ಮಲ್ಲಿಯೇ ಉದ್ಯಮ ಸೃಷ್ಟಿಯಾಗಬೇಕು.

ಎರಡನೆಯದಾಗಿ ಉದ್ಯಮ ಮತ್ತು ಕೃಷಿ, ಇವೆರಡರಲ್ಲಿ ಯಾವುದೇ ಒಂದು ಮಾತ್ರ ಅಭಿವೃದ್ಧಿಗೆ ಬರುವುದು ಬಿಟ್ಟು, ಅವು ಒಂದಕ್ಕೊಂದು ಪೋಷಕವಾಗಿಯೂ, ಪೂರಕವಾಗಿಯೂ, ಬೆಳೆದುಬರಬೇಕು. ಏಕಮಾತ್ರ ಉದ್ಯಮ, ಏಕಮಾತ್ರ ಕೃಷಿ, ಎನ್ನುವಂಥ ದುರ್ಗತಿಗೆ ನಾವು ಒಳಗಾಗಬಾರದು.

ನಾವು ಪ್ರಥಮತಃ ಒಂದು ವಾಣಿಜ್ಯ ಸಂಘವನ್ನು ರಚಿಸಿಕೊಂಡೆವು. ಯಾರ ಕೈಯಲ್ಲೂ ಕಾಸಿಲ್ಲದ ದುಷ್ಕಾಲದಲ್ಲಿ ವಾಣಿಜ್ಯ ಸಂಘವನ್ನೇರ್ಪಡಿಸುವುದೆಂದರೆ ದೊಡ್ಡ ಹುಚ್ಚುತನವೆಂದು ಬಹಳ ಜನ ಅಂಜಿಕೆ ಹಾಕಿದರು. ನಾವು ಅದನ್ನು ಲೆಕ್ಕಿಸದೆ ಮುಂಬರಿದು ಆರಂಭದ ವರ್ಷ ಸುಮಾರು ೩೦೦೦ ಡಾಲರು ಕೂಡಿಸಿದೆವು.

ಪ್ರತಿಮಾಸವೂ ಸುತ್ತಲಿನ ಬೆಳೆ ಮಾರಿ ಹೋಗುವುದರ ಸಲುವಾಗಿ ಒಂದು ಮಾರ್ಕೇಟನ್ನು ನಿರ್ಮಿಸುವುದು ನಮ್ಮ ಮುಖ್ಯ ಕಾರ್ಯವಾಯಿತು. ಹೊರಗಿನ ಉದ್ಯಮಗಳನ್ನು ನಾವು ಅಪೇಕ್ಷಿಸಿಕೊಂಡು ಕಾಯುವಹಾಗಿರಲಿಲ್ಲ. ಹಾಗವು ಬಂದರೆ ನಮ್ಮ ಅಡ್ಡಿ ಇಲ್ಲ. ಆದರೆ ನಮ್ಮ ಹೊಲದ ಉದ್ಧಾರಕ್ಕೆ ನಾವೇ ಕೈಹಾಕಬೇಕು, ಅಂದರೆ ನಮ್ಮ ಉದ್ಯಮಗಳನ್ನೇ ಮುಂದೆತರಬೇಕು.

೧೫,೦೦೦ ಬಂಡವಲಿನ ಹಾಲುಮಾರುವ ಚಿಕ್ಕ ಸಂಸ್ಥೆಯೊಂದನ್ನು ಕಟ್ಟಿದಾಗ, ನಾವು ಯಾರಿಗೂ ಯಾವ ಬಗೆಯ ಆಶ್ವಾಸನೆಯನ್ನೂ ಕೊಡಲಿಲ್ಲ. ಪ್ರತಿಯೊಬ್ಬ ಪಾಲುಗಾರನಿಗೂ "ನಿನ್ನ ಪಾಲುಗಾರಿಕೆಯನ್ನು ಈ ಕ್ಷಣ ಮರೆತುಬಿಡು. ನಿನ್ನ ಹಣಕ್ಕೆ ಯಾವ ಪ್ರತಿಫಲವೂ ಸಿಗಲಾರದೆಂದೇ ಎಣಿಸು" ಎಂದು ಎಚ್ಚರಿಸಿದೆವು. ರೈತರಿಗೆ ಹದಿನೈದು ದಿನಕ್ಕೊಂದು ಬಾರಿ ಹಣಸಿಗುವ ಹಾಗೆ ಆದರೆ ದೊಡ್ಡದಾಯಿತು ಎಂದು ಪದೇ ಪದೇ ಹೇಳಿದೆವು. ಆದರೆ ಈ ವರೆಗೂ ವರ್ಷ ವರ್ಷ ೬% ಲಾಭಾಂಶ ಹಂಚಿದ್ದೇವೆ; ಮೊನ್ನೆ ೧೦% ಲಾಭಾಂಶ ದೊರೆಯಿತು. ಆ ಮಾತು ಬೇರೆ.

X X X

ಟೆನಸಿ ನದಿಯು ಸಂಚಾರಕ್ಕೆ ಯೋಗ್ಯವಾದುದು ನಮಗೆ ಒಳ್ಳೆಯದಾಯಿತು. ಹಿಟ್ಟಿನ ಗಿರಣಿಯೊಂದು ಡಿಕಟೂರಿನಲ್ಲಿ ತನ್ನ ಧ್ವಜವನ್ನು ನೆಟ್ಟು ಯಶಸ್ವಿಯಾದುದರಿಂದ, ನಮ್ಮ ರೈತರು ಧೈರ್ಯವಾಗಿ ಕಾಳು ಬೆಳೆಯಿಸಲು ಅನುಕೂಲವಾಯಿತು. ಈ ಹಿಂದೆ ಸಾಗಾಟದ ಖರ್ಚು ವಿಪರೀತವಾದುದರಿಂದ ಯಾರೂ ಡಿಕಟೂರಿಗೆ ಆಕರ್ಷಿತರಾಗಿರಲಿಲ್ಲ. ಈಗ ಗಿರಣಿಯೂ ಬಂತು; ರೈತರ ಕಾಳಿಗೆ ಮಾರ್ಕೆಟೂ ಉಂಟಾಯಿತು.

ಈ ಕೆಲವು ನಿದರ್ಶನಗಳಿಂದ ನಮ್ಮೂರಿನಲ್ಲಾದ ಕ್ರಾಂತಿಯನ್ನು ನೀವು ಗುರುತಿಸಬಹುದು. ನೆಲದ ಸಾರಪಾಲನೆಗೆ ಸಹಾಯವಾಗುವ ಉದ್ಯಮಗಳಿಂದಲೇ ಜನರು ಉನ್ನತಿ ಪಡೆದಿದ್ದಾರೆ. ನಿರಾಶೆಯ ಕೂಪದಲ್ಲಿ ತೊಳಲುತ್ತಿದ್ದ ಜನರಿಂದು ಧನಧಾನ್ಯಭರಿತವಾದ ಸಂಪತ್ತಿನ ರಾಜ್ಯದಲ್ಲಿ ನಲಿದಾಡುತ್ತಿದ್ದಾರೆ. ನೆರೆಯಿಂದ ಬನ್ನಪಟ್ಟ ಜನರಿಂದು ನೆರೆಯನ್ನು ಅಂಕೆಗೀಡಾಗಿಸಿದ್ದಾರೆ.

ಟೆನಸಿ ಕಂದರದ ಪ್ರಾದೇಶಿಕ ಬೆಳವಣಿಗೆಯ ಸುಸಂದರ್ಭವನ್ನು ನಮಗೆ ಬೇಕಾದ ರೀತಿಯಲ್ಲಿ ಉಪಯೋಗಿಸಿಕೊಂಡುದೇ ಇದಕ್ಕೆಲ್ಲ ಕಾರಣ. ಇನ್ನು ನಮಗೆ ಸೋಲಿಲ್ಲ.

ಹತ್ತಿ, ಕಾಳು, ಗೋಧಿ, ಜಾನುವಾರು, ಹಾಲು, ಮರಮಟ್ಟು ಮುಂತಾದ ಎಲ್ಲ ಬಗೆಯ ಕೃಷಿ ಉತ್ಪತ್ತಿಗೂ ಡಿಕಟೂರಿನಲ್ಲೀಗ ಮಾರ್ಕೆಟಿರುವುದರಿಂದ ನಮ್ಮೂರ ವ್ಯಾಪಾರದ ಮೊಬಲಗು ಲಕ್ಷಮಿಲಿಯದ ಗಡಿಯನ್ನು ಮೀರಿರುವುದು ಆಶ್ಚರ್ಯವಲ್ಲ. ಹೀಗಾಗಲು ಮಣ್ಣಿನ ಪುನರ್-ರಚನೆ ಒಂದು ಕಾರಣ- ನೆರೆನಿಯಂತ್ರಣ. ಇನ್ನೊಂದು. ಯಾನ ಸೌಕರ್ಯ ಮೂರನೆಯದು- ಮಲೇರಿಯಾ ನಿಯಂತ್ರಣ ನಾಲ್ಕನೆಯದು- ಅಂತೂ ಟೀವೀಏ ಮತ್ತು ಜನ ಒಡಗೂಡಿ ನಡೆದುದೇ ಒಂದು ಮಹತ್ವದ ಕಾರಣ-

ಮಲೇರಿಯಾ ನಿಯಂತ್ರಣದ ಕತೆ ಕೇಳಿ. ನೀವೆಂದಾದರೂ ಮಲೇರಿಯಾ ಅನುಭವಿಸಿದ್ದೀರಾ? ನನಗದು ಗೊತ್ತು- ಹಾಗೆ ಹೇಳಿದರೆ

ನಮ್ಮ ಜನರಿಗೆಲ್ಲ ಅದರ ಅನುಭವವಿದೆ- ಮಲೇರಿಯಾ ಬಂದಾಗ ಊರು ಬಿಟ್ಟು, ಕೆಲಸಬಿಟ್ಟು ಓಡಿಹೋಗೋಣ ಅನಿಸುತ್ತದೆ.

ನಮ್ಮ ಟೀವೀಏ ನಿರ್ಮಾಣವಾದೊಡನೆ, ಆ ದಿವಾಳಿಯಾದ ಬಟ್ಟೆ ಬರೆಯ ಉದ್ಯಮವನ್ನು ಯಾರೋ ಒಬ್ಬ ತೆಗೆದುಕೊಂಡ. ಕೆಲಸಗಾರರನ್ನು ಪರೀಕ್ಷೆಮಾಡಿದರೆ ನೂರಕ್ಕೆ ಮೂವತ್ತೈದು ಜನ ಮಲೇರಿಯಾ ಪೀಡಿತರಿದ್ದರು. ಆದರೆ ಟೀವೀಏಯ ಮಲೇರಿಯಾ ನಿಯಂತ್ರಣ ಕಾರ್ಯಕ್ರಮದ ಫಲವಾಗಿ ಈಗ ನೂರಕ್ಕೊಬ್ಬ ಸಿಗುವುದೂ ಕಷ್ಟ. ಕೆಲಸಗಾರರ ಕಾರ್ಯಸಾಮರ್ಥ್ಯ ಎಷ್ಟೋ ಅಧಿಕವಾಗಿದೆ.

ಔದ್ಯೋಗೀಕರಣದ ವಿಶಾಲದೃಷ್ಟಿಯಿಂದ ಅವಲೋಕಿಸುವುದಾದರೆ ನಮ್ಮೂರಲ್ಲಿ ಹಿಟ್ಟನಿಂದ ಇಟ್ಟಿಗೆಯ ವರೆಗೆ, ಬುಟ್ಟಿಯಿಂದ ಕಾಂಕ್ರೀಟಿನ ವರೆಗೆ ಮತ್ತು ಸ್ಕ್ರೂ, ಕೀಲುಗಳಿಂದ ಟ್ಯಾಂಕು ಸ್ಟೀಮರುಗಳ ವರೆಗಿನ ಎಲ್ಲ ಬಗೆಯ ಸಾಮಗ್ರಿಗಳೂ ತಯಾರಾಗುತ್ತವೆ. ಹದಿನೈದು ವರುಷಗಳ ಹಿಂದೆ ನಮಗೆ ಇದ್ದುದು ಒಂದೇ ಒಂದು ಉದ್ಯಮ ಎಂಬುದನ್ನಿಲ್ಲಿ ಎಣಿಸಿ ನೋಡಿ.

ಖಾಸಗಿ ದೆಸೆಯಿಂದಾಗಲಿ, ಸಾರ್ವಜನಿಕ ಸಂಸ್ಥೆಯೊಂದರ ಅನುಭವದ ಮೇಲಿಂದಾಗಲಿ, ಹೇಳುವುದಾದರೆ ನಾನೀವರೆಗೆ ನೋಡಿದ ಪೈಕಿ ಟೀವೀಏ ಹತ್ತಿರ ಉತ್ತಮೋತ್ತಮ ಸಲಹೆಗಾರರೂ, ತಜ್ಞರೂ ಇದ್ದಾರೆ- ಅವರು ಅತಿ ವಿಶ್ವಾಸದಿಂದ ಕೆಲಸ ಮಾಡುವಂಥ ಜನರು. ''ಹೀಗೆ ಮಾಡಿ" ಎಂದು ಅವರು ನಮಗೆ ಒಂದು ಬಾರಿಯೂ ಅಪ್ಪಣೆ ಜಾರಿಮಾಡಿದುದಿಲ್ಲ. ಯಾವಾಗಲೂ "ಇಗೋ, ವಿಷಯ ಹೀಗಿದೆ, ವಿವರ ಹೀಗೆ. ಇನ್ನು ನಿಮಗೆ ಇಷ್ಟಬಂದಂತೆ ನಿರ್ಧಾರಮಾಡಿಕೊಳ್ಳಿ" ಎಂದಷ್ಟೇ ಸೂಚಿಸುತ್ತಾರೆ- ಸ್ವತಂತ್ರನಿರ್ಧಾರಕ್ಕೆ ಇಷ್ಟೊಂದು ಅವಕಾಶವುಳ್ಳ ಸಂಸ್ಥೆ ಪ್ರಪಂಚದಲ್ಲಿ ಬೇರೆ ಇರಲಾರದು-

ಇಂದು ಡಿಕಟೂರಿನ ಜನರು ೧೨೦ ಮಿಲಿಯ ಕಿಲೋವಾಟ್ ಗಂಟೆ ವಿದ್ಯುತ್ತನ್ನುರಿಸುತ್ತಾರೆ. ಇತ್ತೀಚೆಗೆ ಅಲ್ಲಿ ೧೨ ಮಿಲಿಯ ಡಾಲರಿನ ಒಂದು ತಾಮ್ರದ ಕಾರ್ಖಾನೆ ಆರಂಭವಾಗಿದೆ. ಪಟ್ಟಣದ ಜನಸಂಖ್ಯೆ

ಇಮ್ಮಡಿಯಾಗಿ ಬೆಳೆದಿದೆ. ಮೂವತ್ತೈದು ದೇವಾಲಯಗಳಿವೆ. ಒಂದು ಹೊಸ ಹೈಸ್ಕೂಲು ಕಟ್ಟುವುದಕ್ಕೋಸ್ಕರ ನಮ್ಮ ಜನ ಸುಮಾರು ಒಂದೂವರೆ ಮಿಲಿಯದ ವರೆಗೆ ಕರ ಹೊರಿಸಿಕೊಂಡಿದ್ದಾರೆ.

ಮೊನ್ನೆ ಮೊನ್ನೆ ಇಂಡಿಯದಿಂದ ಬಂದಿದ್ದ ಡಾಕ್ಟರ ಸೇನರು "ವೃದ್ಧಿಂಗತವಾಗುತ್ತಿರುವ ಪ್ರಜಾಪ್ರಭುತ್ವದ ಪ್ರಕಾಶವನ್ನು ಉದ್ದೀಪಿಸುವ ದೀವಿಗೆ ಎಂದರೆ ಟೀವೀಏ" ಎಂದು ಪ್ರಶಂಸಿಸಿದರು. ಹಲವು ಜನ ಪ್ರವಾಸಿಗಳು ನಮ್ಮ ಹತ್ತಿರ "ಇಷ್ಟೆಲ್ಲ ಟೀವೀಏ ಇಲ್ಲದೆ ನಡೆಯಬಹುದೆ?" ಎಂದು ಪ್ರಶ್ನಿಸಿದರೆ ನಾವವರಿಗೆ "ಬಹುದು, ಗಿಹುದು, ನಾವರಿಯೆವು. ನಡೆಯಲಿಲ್ಲ ಎಂಬುದೊಂದು ಮಾತ್ರ ಖಂಡಿತ" ಎನ್ನುತ್ತೇವೆ.

## ಅಧ್ಯಾಯ ಹನ್ನೆರಡು.

## ಟೀವೀಏ ಮತ್ತು ಭಾರತ.

ಆರ್ಥಿಕ ಪ್ರಗತಿಯಲ್ಲಿ ಹಿಂದುಳಿದ ಭಾರತಕ್ಕೆ ಟೀವೀಏ ಒಂದು ಉತ್ತಮವಾದ ಆದರ್ಶಪಾಠ. ಸಮಸ್ತ ದೇಶದ ಆರ್ಥಿಕೋನ್ನತಿಯನ್ನು ಒಮ್ಮೆಲೆ, ಒಂದೇ ಪೆಟ್ಟಿಗೆ, ಸಾಧಿಸುವುದು ಸಾಧ್ಯವಿಲ್ಲವಾದ್ದರಿಂದ ದೇಶದ ಒಂದೊಂದು ವಿಶಿಷ್ಟಪ್ರದೇಶದ ಬೆಳವಣಿಗೆಯನ್ನು ಮೆಟ್ಟಲು ಮೆಟ್ಟಲಾಗಿ ಕಟ್ಟುವುದು ವಿಹಿತವಾಗಿದೆ. ೧೯೪೭ರಲ್ಲಿ ಸ್ವಾತಂತ್ರ್ಯ ದೊರೆತೊಡನೆ ನಮ್ಮ ಧುರೀಣರು ಯೋಜನೆಗಳ ಗಾಳಿಯ ಹಾರಾಟಕ್ಕೆ ಆರಂಭಿಸಿದರು. ಒಂದು ಸಲ ಒಟ್ಟು ೨೬೧ ಯೋಜನೆಗಳನ್ನು ಕೂಡಲೇ ಕೈಗೊಳ್ಳುವಷ್ಟು ಅವರು ತಾಳ್ಮೆಗೆಟ್ಟದುಂಟು. ಆದರೆ ಏರೇರುತ್ತ ಬಂದು ಹಣದ ಉಬ್ಬರ, ಅದರ ಬೆನ್ನಹಿಂದೆ ರೂಪಾಯಿಯ ಬೆಲೆಯ ಇಳಿತಾಯ, ಸಾಲದುದಕ್ಕೆ ಈ ಎಲ್ಲ ಕನಸಿನ ಯೋಜನೆಗಳನ್ನು ರಾಷ್ಟ್ರದ ಜನರ ಉಳಿತಾಯದಿಂದಲೇ ನಿರ್ವಹಿಸಬೇಕಲ್ಲದೆ ಪರದೇಶಿ ಬಂಡವಲು ಬಹುಕಾಲ ಲಾಭದಾಯಕವಾಗದೆಂಬ ಭೀತಿ—ಎಲ್ಲ ಕೂಡಿ ಅವರಿಗೆ ಪರಿಸ್ಥಿತಿಯ ಯಥಾರ್ಥತೆಯ ಅರಿವನ್ನುಂಟುಮಾಡಿವೆ.

ರಾಷ್ಟ್ರದ ವಾರ್ಷಿಕ ಆದಾಯವು ಇಷ್ಟೊಂದು ಹೀನ ದೆಶೆಯಲ್ಲಿರುವಾಗ ಯೋಜನೆಗಳ ಬಡಾಯಿ ಕೊಚ್ಚುವುದು ಸರಿಯಲ್ಲ. ಆದರೂ ಯಥಾಶಕ್ತಿ ಪ್ರಾದೇಶಿಕ ಉನ್ನತಿಯ ಕಾರ್ಯಕ್ರಮವನ್ನು ಸ್ವೀಕರಿಸದಿದ್ದಲ್ಲಿ ಭಾರತಕ್ಕೆ ಉಳಿಗಾಲವಿಲ್ಲವೆಂಬುದೂ ನಿಜ. ಇಡಿಯ ದೇಶದಲ್ಲಿ ಯೋಜನೆಗಳ ಜಾಲವನ್ನೇ ಹರಡುವೆವೆಂಬ ಅಹಂಕಾರವನ್ನು ತೊರೆದು ಅಲ್ಲಲ್ಲಿ, ಒಂದೊಂದು ಪ್ರದೇಶದಲ್ಲಿ, ಟೀವೀಏಯಂಥ ಪ್ರಾದೇಶಿಕ ಯೋಜನೆಗಳನ್ನು ಕೈಗೊಳ್ಳಬೇಕು. ರಾಮಪಾದಸಾಗರ, ಕೋಸಿ, ಹಿರಾಕುಡ, ತುಂಗಭದ್ರ, ದಾಮೋದರ, ಭಾಕ್ರಾ ಈ ಮೊದಲಾದ ದೊಡ್ಡ ದೊಡ್ಡ ಭಿನ್ನೋದ್ದೇಶಕ ನದೀ ಯೋಜನೆಗಳನ್ನು ಭಾರತ ಸರಕಾರ ಶೀಘ್ರವೇ ಕಾರ್ಯರೂಪಕ್ಕೆ ತರುತ್ತಿದೆ. ಇವುಗಳ ಪೈಕಿ ನಾಲ್ಕೈದು ಈಗಾಗಲೇ ಆರಂಭವಾಗಿವೆ. ಆದರೆ ಇವುಗಳಲ್ಲಿ ಟೀವೀಏ

ಮಾದರಿಯನ್ನು ಅತಿಶಯವಾಗಿ ಅನುಸರಿಸರಿಸುವ ಯೋಜನೆಯೆಂದರೆ ದಾಮೋದರ ಕಂದರದ ಯೋಜನೆ ಅದರ ಅಭಿವೃದ್ಧಿಗೆ ಟೇವೀಏ ಯಂತೆಯೇ ಜನತಾಪ್ರತಿನಿಧಿಗಳೂ, ಪ್ರಾಂತೀಯ ಮತ್ತು ಕೇಂದ್ರ ಸರಕಾರದ ಪ್ರತಿನಿಧಿಗಳೂ ಜತೆಯಾಗಿ ಉಳ್ಳ "ದಾಮೋದರ ವೇಲಿ ಕೊಪೊರ್ರೇಶನ್" ಎಂಬ ಸಂಸ್ಥೆ ನಿರ್ಮಾಣಗೊಂಡು ಕೆಲಸಕ್ಕೆ ತೊಡಗಿದೆ.

ಛೋಟಾ ನಾಗಪುರದ ಬೆಟ್ಟಗಳಲ್ಲಿ ಹುಟ್ಟಿದ ದಾಮೋದರ ನದಿ ಬಿಹಾರ್ ಪ್ರಾಂತ್ಯದಲ್ಲಿ ೧೮೦ ಮೈಲು ಹರಿದು, ಅಲ್ಲಿಂದ ಬಿಹಾರ ಪ್ರಾಂತ್ಯವನ್ನು ಸೇರಿ, ಹುಗಳಿ ನದಿಯನ್ನು ಕೂಡುತ್ತದೆ. ನದಿಯು ಪಾತ್ರ ಖನಿಜ ಸಂಪತ್ತಿನಲ್ಲಿ ಭಾರತದಲ್ಲೇ ಮುಂದಾದ ಪ್ರದೇಶ. ಆದರೂ ದಾಮೋದರದ ವಿಕೋಪಕ್ಕೆ ತುತ್ತಾಗುವ ಕಂದರದ ಐದು ಮಿಲಿಯ ಜನರ ಜೀವನದ ಮಟ್ಟ ಅತ್ಯಂತ ಹೀನವಾಗಿರುವುದು ಶೋಚನೀಯ. ದೂರದೃಷ್ಟಿಯ ದಾಮೋದರ ಯೋಜನೆಯ ಪ್ರಕಾರ ನೀರಾವರಿಯ ಸೌಕರ್ಯವುಳ್ಳ ಭೂಮಿಯ ವಿಸ್ತಾರ ಈಗಿನ ೧೮೬,೦೦೦ ಎಕರೆಯಿಂದ ೧೦೦೦೦೦೦ ಎಕರೆಗೂ, ವಿದ್ಯುತ್ತಿನ ಪೂರೈಕೆ ೧೩೭,೦೦೦ ಕಿಲೋವಾಟ್ಟಿನಿಂದ ೧೮೭೦೦೦ಕ್ಕೂ ಏರುವ ಸಂಭವವಿದೆ. ಅಲ್ಲದೆ ಅರಣ್ಯರಕ್ಷಣೆ, ನೌಕಾಸಂಚಾರ, ಔದ್ಯೋಗೀಕರಣ, ನೆರೆನಿಯಂತ್ರಣ, ಮೀನುಗಾರಿಕೆ, ವಿಹಾರ ಸೌಕರ್ಯ ಮುಂತಾದ ಎಲ್ಲ ಬಗೆಯ ಕಾರ್ಯವಿಶೇಷಗಳೂ ಸಂಪೂರ್ಣವಾಗಿ ವಿಕಾಸವಾದಾಗ ದಾಮೋದರ ಕಂದರವು ಟೇವೀಏ ಪ್ರದೇಶದಂತೆಯೇ ಪ್ರಪಂಚದ ಸಿರಿವಂತ ಪ್ರದೇಶಗಳಲ್ಲೊಂದಾಗುವುದು ಖಂಡಿತ.

ಜನರಿಗೆ ಯೋಜನೆಯಲ್ಲಿ ಯಾವ ಬಗೆಯ ಪ್ರಾತಿನಿಧ್ಯವುಂಟು? ಎಂತಹ ಅಧಿಕಾರ ದೊರೆತೀತು? ಆಡಳಿತೆಯ ಯಾವ ಅಂಶ ಅವರ ಕೈಯೊಳಗೆ ಸೇರೀತು? ಕೇಂದ್ರಸರಕಾರ ಎಷ್ಟು ಮಟ್ಟಿಗೆ ತನ್ನ ಕೈವಾಡವನ್ನು ಸಾಗಿಸಬಹುದು? ಈ ಎಲ್ಲ ಪ್ರಶ್ನೆಗಳಿಗೆ ಈಗಲೇ ಉತ್ತರ ಕೊಡುವುದು ಸಾಧ್ಯವಿಲ್ಲ. ಎಲ್ಲವನ್ನೂ ಸರಕಾರಿ ಅಧಿಕಾರಿಗಳೇ

ಮಾಡುವುದಿದ್ದ ಪಕ್ಷಕ್ಕೆ ಇಂಥ ಯೋಜನೆಗಳಿಂದ ದೀರ್ಘಕಾಲದ ಲಾಭ ಬರಲಾರದು. ಅಶಿಕ್ಷಿತರಾದ ಜನಗಳಿಗೆ ಯಾವ ರೀತಿಯಲ್ಲಿ, ಯಾವ ಯಾವ ಅಧಿಕಾರವನ್ನು ಬಿಟ್ಟುಕೊಡಬಹುದು? ಎಂಬುದೂ ಒಂದು ಸಂದಿಗ್ಧದ ಪ್ರಶ್ನೆ. ಆದರೆ ಜನತೆಯ ಸಾಮಾನ್ಯಬುದ್ಧಿಯನ್ನು ನಂಬಿ ವಿಕೇಂದ್ರೀಕರಣದ ದಾರಿಯಾಗಿ ನಡೆದು, ಪ್ರಜಾತಂತ್ರದ ಹೆದ್ದಾರಿಯನ್ನು ನಾವು ಮುಟ್ಟುವಂತಾದರೂ, ಅದು ಸದ್ಯದ ಪರಿಸ್ಥಿತಿಯಲ್ಲಿ ನಮ್ಮ ಪುಣ್ಯವೆಂದೇ ಭಾವಿಸಲು ಅಡ್ಡಿಯಿಲ್ಲ.

**ತಮಾಸ್ ಶುದ್.**

---

## ಸಂದರ್ಭ ಸಾಮಗ್ರಿ


1 T V A : DEMOCRAGY ON THE MARCH — DAVID E. LILIENTHAL
2 ASMINISTRATIVE DE-CENTRALIZATION OF FEDERAL FUNCTIONS — DAVID. E. LILIENTHAL
3 FOOD AT THE GRASS-ROOTS — T V A
4 SOIL, THE NATION'S BASIC HERITAGE — T V A
5 T V A 1947 — T 1 A
9 THE VALLEY IS PAYING OFF 1948 — T V A
7 MULTI-PURPOSE RESERVOIR OPERATION — CLARENCE. E. BLEE
8 THE DECATUR STORY — BARRET SHELTON
9 DAMODAR VALLEY PROJECT — G. O. I. PUBLICATION
10 THE MAKING OF SOCIETY — T. A. CALVERT
11 ROAD TO SERFDOM — E. A. VON HAYEK
12 CASE FOR CONSERVATISM — QUINTIN HOGG
13 PROBLEMS OF LENINISM — J. V. STALIN
14 FREEDOM AND PLANNING — BARBARA WOOTON

# ಪದಪ್ರಯೋಗ.

| | |
|---|---|
| ಅರ್ಥಶಾಸ್ತ್ರಿ | Economist |
| ಅಧಿಕಾರ | Authority |
| ಆಡಳಿತ | Administration |
| ಉದ್ದಿಮೆ, ಉದ್ಯಮ | Industry |
| ಔದ್ಯೋಗೀಕರಣ | Industrialization |
| ಯುನೋದ ಆಹಾರವ ಕೃಷಿಸಂಘ | F. A. O. |
| ಏಕರೂಪತೆ | Standardization, Uniformity |
| ಐಕ್ಯ | Unity |
| ಕಾರ್ಯಸಾಮರ್ಥ್ಯ | Efficiency |
| ಕೂಡುಬಂಡವಲಿನ ಸಂಸ್ಥೆ | Joint-Stock Company |
| ಕೊನೆನಿಲುಮನೆ | Terminus |
| ಕಂದರ | Valley |
| ಗುತ್ತಿಗೆ | Monopoly |
| ತಜ್ಞ, ವಿಶೇಷಜ್ಞ | Specialist, Expert |
| ದ್ವೈತವಾದ | Pluralism |
| ನದೀಪಾತ್ರ | River Basin |
| ನೆರೆನಿಯಂತ್ರಣ | Flood-control |
| ಪೂರೈಕೆ | Supply |
| ಪೂರಕ | Complementary |
| ಪೂರ್ವಬಂಧಿತ | Pre-fabricated |
| ಪ್ರದರ್ಶಕ ಕೇಂದ್ರ | Demonstration Centre |
| ಪ್ರಾದೇಶಿಕತೆ | Regionalism |
| ಪ್ರಾಂತೀಯತೆ | Provincialism |
| ಬೇಡಿಕೆ | Demand |
| ಬಹೂದ್ದೇಶಕ | Multi-purpose. |
| ಮಣ್ಣಿನ ಸಾರಪಾಲನೆ | Soil Conservation |
| ಮೇಲಾಟದ ಸಮಾಜ | Competitive Society |
| ಮಂದಿ | Slump |
| ಯುನೊ, ಸಂಯುಕ್ತ ರಾಷ್ಟ್ರ ಸಂಘ. | UNO |
| ಯೋಜನೆ | Planning |
| ಯೋಜನಾತ್ಮಕ ಸಮಾಜ | Planned Society |
| ವಿಕೇಂದ್ರೀಕರಣ | De-centralization |
| ವ್ಯಾಪಾರಿ, ಬೇಹಾರಿ | Business man |

PRINTED AND PUBLISHED BY P. R. RAO AT THE KALLIANPUR PRESS, LTD., UDIPI.  10-1-'50.

